ಗೌರೀಶ ವಾಚನಮಾಲೆಯ



ಕನ್ನಡ ೨ನೆಯ ಪುಸ್ತಕದ



# ಶಬ್ದಾರ್ಥವು



ಪ್ರಕಾಶಕರು :

ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕ

ಧಾರವಾಡ

# ೧. ಕನ್ನಡ ಬಾವುಟ

ಸಾರಾಂಶ:— ಹಿಂದಕ್ಕೆ ಕನ್ನಡ ನಾಡಿನಲ್ಲಿ ಪುಲಕೇಶಿ ಮೊದಲಾದ ವೀರರು ಕನ್ನಡಿಗರ ನಿಶಾನೆಯನ್ನು ಮೆರೆಯಿಸಿದರು. ಯುದ್ಧದಲ್ಲಿ ಶೌರ್ಯದಿಂದ ಕಾದಿದರು. ಕೀರ್ತಿ ಗಳಿಸಿದರು. ಕನ್ನಡಿಗರೇ, ನೀವಾದರೂ ಈಗ ಕನ್ನಡ ಬಾವುಟವನ್ನು ಮೆರೆಯಿಸಿರಿ. ಕನ್ನಡ ಕಾಡಿನ ಹೆಸರು ಜಗತ್ತಿನಲ್ಲಿ ಹಬ್ಬುವಂತೆ ಮಾಡಿರಿ, ಎಂದು ಹೇಳಿರುವರು.



ಚೆನ್ನಿಗ=ಚೆಲುವ
ಬಾವುಟ=ನಿಶಾನೆ
ನನ್ನಿಯ ನುಡಿಯಲಿ=ಸತ್ಯವಾಗಿಯೂ
ಕೊಡುತಿಹ=ಕೊಡುತ್ತಿರುವ
ಮೆರೆಯಿಸುವಾ=ಮೆರೆಯುವಂತೆ ಮಾಡೋಣ

ಭಾವಾರ್ಥ:— ಚೆಲುವ ಗೆಳೆಯರೆ ಕನ್ನಡ ನಿಶಾನೆಯನ್ನು ಏರಿಸೋಣ ಬನ್ನಿರಿ. ಸತ್ಯವಾಗಿಯೂ ಅನ್ನವನ್ನು ಕೊಡುತ್ತಿರುವ ಕನ್ನಡ ದೇವಿಯನ್ನು ಮೆರೆಯಿಸೋಣ ಬನ್ನಿರಿ.

೨

ಮೊದಲಿನ=ಹಿಂದಿನ ಕಾಲ
ಕನ್ನಡ=ಕನ್ನಡನಾಡಿನ
ಹಿರಿ ಕಿರಿ ಕಲಿಗಳು=ಸಣ್ಣ ದೊಡ್ಡ ಶೂರರು
ಮುದದಿಂದ=ಪ್ರೀತಿಯಿಂದ
ಎಲ್ಲರಬಾಯೊಳಗೆ=ಎಲ್ಲ ಜನರ ಬಾಯಲ್ಲಿ
ಉಳಿದಿಹ=ಉಳಿದಿರುವ
ಮನ್ನೆಯರು=ನಾಯಕರು (ಸರದಾರರು)
ಬಾವುಟ ಮೆರೆಯಿಸಿ=ನಿಶಾನೆಯನ್ನು ಮೆರೆಯುವಂತೆ ಮಾಡಿ
ಬಾಳಿದರು=ಆಳಿಹೋದರು
ಪದುಳವ ಪಡೆದರು=ಸುಖವನ್ನು ಹೊಂದಿದರು

ಭಾವಾರ್ಥ— ಹಿಂದಿನ ಕಾಲಕ್ಕೆ ಕನ್ನಡ ದೇಶದ ಶೂರ ಸರದಾರರು ಕನ್ನಡ ನಿಶಾನೆಯನ್ನು ಮೆರೆಯಿಸಿದರು. ಪ್ರೀತಿಯಿಂದ ಎಲ್ಲರಿಂದಲೂ ಹೊಗಳಿಸಿಕೊಂಡು ಸುಖವಾಗಿ ಬಾಳಿದರು.

೩

ನಾಡಿನ ವೀರರು=ಕನ್ನಡ ದೇಶದ ಶೂರರು
ಬಾವುಟಕಾಗಿಯೇ=ನಿಶಾನೆಗಾಗಿಯೇ
ಕೀರ್ತಿಯತಾಳಿದರು=ಕೀರ್ತಿಯನ್ನು (ಹೊಂದಿದರು ಹೆಸರಾದರು)
ಕಳದಲಿ=ಯುದ್ಧದಲ್ಲಿ
ನೆರೆ=ಚೆನ್ನಾಗಿ
ಹೋರಾಡಿದರು=ಕಾದಾಡಿದರು
ಮಡಿದರು=ಸತ್ತರು
ನಾಡೊಡೆಯರು=ಅರಸರು
ಪುಲಿಕೇಶಿ ಚೆನ್ನಿಗರು=ಪುಲಿಕೇಶಿ ಮೊದಲಾದ ಸುಂದರರು

ಭಾವಾರ್ಥ— ಕನ್ನಡ ದೇಶದ ಶೂರರು ನಿಶಾನೆಗಾಗಿಯೇ ಕಾದಿ ಸತ್ತಿರುವರು. ಕೀರ್ತಿಯನ್ನು ಹೊಂದಿರುವರು. ಪುಲಿಕೇಶಿ ಮೊದಲಾದ ಕನ್ನಡ ಅರಸರು ಯುದ್ಧದಲ್ಲಿ ಚೆನ್ನಾಗಿ ಕಾದಿ ವೈರಿಗಳನ್ನು ಗೆದ್ದಿರುವರು.

೪

ನಾಡಿಗರೇ=ಕನ್ನಡಿಗರೇ
ಕರುನಾಡಿನವರೇ=ಕನ್ನಡ ದೇಶದವರೇ
ಹಾಡುವ ಕವಿಗಳ=ಹಾಡುವಂಥ ಕವಿ ಜನರ
ಬೆಡಗಿನ=ಸೌಂದರ್ಯದ
ನೀವ್ ಏಳಿರಿ=ನೀವು ತಯಾರಾಗಿರಿ (ಎಚ್ಚರಾಗಿರಿ)
ಎನ್ನುವ ಚಾರಣಿಯು=ಅನ್ನುವ ಹೊಗಳಿಕೆಯು
ಈ ಕೈಗಾರಿಕೆಯು=ಈ ಕವಿತೆ ಮಾಡುವಿಕೆಯು
ನಾಡಿನ ಹಾಡನು=ಕನ್ನಡ ದೇಶದ ಹಾಡುಗಳನ್ನು

ಭಾವಾರ್ಥ — ಕನ್ನಡಿಗರೇ ನೀವು ಎಚ್ಚರಾಗಿರಿ, ಏಳಿರಿ ಎಂಬ ಹೊಗಳುವಿಕೆಯು ಕನ್ನಡ ಕವಿ ಜನರು ಹಾಡುವಂಥ ಸುಂದರ ಕವಿತೆಯು.

೫

ಕನ್ನಡ ಕನ್ನಡವೆಂದು-ಕನ್ನಡವು ಕನ್ನಡವು ಎಂದು
ನುಡಿಯುವದು=ಅನ್ನುವದು
ಕನ್ನಡ ನಾಡಿಗೆ=ಕನ್ನಡ ದೇಶಕ್ಕೆ
ಸಾಜವಿದು=ಸಹಜವಾಗಿರುವದು
ಕನ್ನಡ ನುಡಿಗೆ=ಕನ್ನಡ ಭಾಷೆಗೆ
ಕನ್ನಡಿಗರಿಗೆ=ಕನ್ನಡ ಜನರಿಗೆ
ತೇಜವಿದು=ವೈಭವವಾಗಿರುವದು (ಐಶ್ವರ್ಯವಾಗಿರುವದು)

ಭಾವಾರ್ಥ:— ಕನ್ನಡ ಕನ್ನಡವೆಂದು ಅನ್ನುವದು ಕನ್ನಡ ದೇಶದವರಿಗೆ ಸಹಜವಾಗಿರುವದಲ್ಲದೆ, ಕನ್ನಡ ದೇಶಕ್ಕೆ ಕನ್ನಡನಾಡಿಗೆ, ಕನ್ನಡಿಗರಿಗೆ ವೈಭವವಾಗಿರುವದು. [ಅಭಿಮಾನದ ಸಂಗತಿಯಾಗಿರುವುದು]

೬

ಕನ್ನಡ ಚೆಲುವರೇ=ಕನ್ನಡ ಸುಂದರರೇ
ಏಳಿರಿ ಏಳಿರಿ=ಏಳಿರಿ ಬೇಗ ಏಳಿರಿ
ಕನ್ನಡ ಬಾವುಟ=ಕನ್ನಡಿಗರ ನಿಶಾನೆಯು
ಏರಿತದೋ=ಅದೋ ಮೇಲಕ್ಕೆ ಏರಿತು
ಹುರುಪಿಂ ಬಾಳುವ=ಹುರುಪಿನಿಂದ ಬದುಕುವ
ಹಾದಿಯ ತೋರುತೆ=ಹಾದಿಯನ್ನು ತೋರಿಸುತ್ತ
ಹೆಮ್ಮೆಯನು ಎಮ್ಮೊಳು=ಹುರುಪನ್ನು [ಸೊಕ್ಕನ್ನು] ನಮ್ಮಲ್ಲಿ
ಬೀರಿತದೋ=ಅದೋ ಹುಟ್ಟಿಸುತ್ತಿರುವದು [ತುಂಬುತ್ತಿರುವದು.]

ಭಾವಾರ್ಥ:— ಕನ್ನಡ ಸುಂದರರೇ ಕನ್ನಡಿಗರ ನಿಶಾನೆಯು ಮೇಲಕ್ಕೆ ಏರಿತು. ಏಳಿರಿ ಏಳಿರಿ. ನಾವು ಹುರುಪಿನಿಂದ ಬಾಳುವ ಹಾದಿಯನ್ನು ತೋರಿಸುತ್ತ, ನಮ್ಮಲ್ಲಿ ಹುರುಪನ್ನು [ಸೊಕ್ಕನ್ನು] ತುಂಬುತ್ತಿರುವದು.

ನಾಡಿನ ಹಾಡನು ಹಾಡುತೆ=ಕನ್ನಡ ದೇಶದ ಮೇಲಿನ ಪದಗಳನ್ನು ಹಾಡುತ್ತ
ಕನ್ನಡ ನಾಡಿನ=ಕನ್ನಡ ದೇಶದ
ಬಾವುಟ ಮೆರೆಯಿಸುವಾ=ನಿಶಾನೆಯನ್ನು ಮೆರೆಯಿಸೋಣ
ನಾಡಿನ ಹೆಸರನು=ಕನ್ನಡ ನಾಡಿನ ಹೆಸರನ್ನು
ಜಗದೊಳು ಪಸರಿಸಿ=ಲೋಕದಲ್ಲೆಲ್ಲ ಹಬ್ಬಿಸಿ
ಕನ್ನಡ ಬಾವುಟ ಹಾರಿಸುವಾ=ಕನ್ನಡ ಧ್ವಜವನು ಹಾರಿಸೋಣ

ಭಾವಾರ್ಥ:— ಕನ್ನಡ ಪದಗಳನ್ನು ಹಾಡುತ್ತ ಕನ್ನಡ ನಿಶಾನೆಯನ್ನು ಮೆರೆಯಿಸೋಣ. ಕನ್ನಡ ದೇಶದ ಹೆಸರು ಲೋಕದಲ್ಲೆಲ್ಲ ಹಬ್ಬುವಂತೆ ಕನ್ನಡ ಧ್ವಜವನ್ನು ಹಾರಿಸೋಣ.

## ೨. ಹೊಯ್ ಸಳ

ತಪಸ್ಸು=ಒಂದೇ ಮನಸ್ಸಿನಿಂದ ದೇವರ ಧ್ಯಾನಮಾಡೋಣ
ಗೌಡ=ಹೊಲದ ತೆರಿಗೆ ಎತ್ತುವವ
ಪರಾಕ್ರಮ=ಶೂರತನ
ಅವನ ಕೈಹಿಡಿಯುವವರೇ=ಅವನಷ್ಟು ಗಟ್ಟಿಗರೇ
ಕಾಟ=ಉಪದ್ರವ
ತಲೆಯೆತ್ತದಂತೆ=ಮೇಲೆ ಏಳದಂತೆ
ಬೆರಗಾಗಿ=ಆಶ್ಚರ್ಯಪಟ್ಟು
ಕಲಿ=ಶೂರ
ದಯಪಾಲಿಸಲಿ=ಕೊಡಲಿ
ಆಶೀರ್ವಾದ=ಹರಕೆ
ಬೆಳಕಿಗೆ ಬರಹತ್ತಿದನು=ಹೆಸರಾದನು

ಭಕ್ತಿ=ಸೇವೆ
ಉಪದೇಶ=ಬುದ್ಧಿಯ ಮಾತು
ಹೆಸರಿಗೆ ಬಂದನು=ಹೆಸರಾದನು
ಧ್ಯಾನ=ಚಿಂತನೆ
ಬೆನ್ನಟ್ಟಿ=ಬೆನ್ನು ಹತ್ತಿ
ಜೀವದಾಸೆ=ಜೀವ ಉಳಿಸಿಕೊಳ್ಳ ಬೇಕೆಂಬ ಆಸೆ
ರುಂಡ=ಕುತ್ತಿಗೆಯ ಮೇಲಿನ ಭಾಗ
ಸಂಪತ್ತು=ಐಶ್ವರ್ಯ
ನಾಡು=ದೇಶ
ಸಾಮ್ರಾಜ್ಯ=ಮಾಂಡಲಿಕ ಅರಸರುಳ್ಳ ರಾಜ್ಯ

## ೩. ಕುದುರೆ

**ಸಾರಾಂಶ:**— ಕುದುರೆ ಬಲು ಚುರುಕು ಪ್ರಾಣಿ, ಅದರ ಕಿವಿಗಳು ನೀಟಾಗಿರುವವು. ಕುತ್ತಿಗೆಯ ಮೇಲೆ ಆಯಾಲು ಇರುವವು. ಕೊಳಗಗಳು ಸೀಳಿರುವದಿಲ್ಲ. ಚವರಿಯಂಥ ಬಾಲವಿರುವದು. ಕುದುರೆಗೆ ನಡಿಗೆಗಳನ್ನು ಕಲಿಸುವರು. ಅದು ಕರಿಕೆಯ ಮೇಲೆ ಬಲು ಪ್ರೀತಿ. ಕಾಲುಗಳ ದಾಣಿ ಕಟ್ಟುವರು. ಅದಕ್ಕೆ ಕಡಿವಾಣ ಹಾಕಿ ಹತ್ತುವರು.

ಕುದುರೆ ವೇಗವಾಗಿ ಓಡುವದು. ಅದರ ಓಟದ ಜಿದ್ದೂ ಆಡುವರು. ಅದರ ಮೇಲೆ ಕೂತು ಊರಿಂದ ಊರಿಗೆ ಹೋಗುವರು. ಟಾಂಗಾಕ್ಕೆ ಹೂಡುವರು. ಯುದ್ಧದಲ್ಲಿ ಉಪಯೋಗಿಸುವರು. ಕೆಲವು ಕಡೆ ಒಕ್ಕಲ ತನಕ್ಕೂ ಉಪಯೋಗಿಸುವರು.

ಚಪಲ= ಚುರುಕು
ನೀಟಾಗಿ=ನೆಟ್ಟಗೆ
ಆಯಾಲು= ಕುತ್ತಿಗೆಯ ಮೇಲಿನ ಕೂದಲು
ಅಲ್ಲಾಡಿಸು= ಅಗಳಾಡಿಸು
ಒತ್ತರದಿಂದ= ತೀವ್ರವಾಗಿ
ಹೇಕರಿಸು= ಕುದುರೆಯ ಒದರುವಿಕೆ
ಜೀನು= ಕುದುರೆಯ ಮೇಲೆ ಕೂಡ್ರುವಾಗ ಹಾಕಲಿಕ್ಕೆ ಮಾಡಿದ ತೊಗಲಿನ ಆಸನ
ಕಡಿವಾಣ=ಲಗಾಮು
ದಿಟ್ಟತನದ= ಧೈರ್ಯದ
ಜಿದ್ದ = ರೊಕ್ಕಹಚ್ಚಿ ಆಡೋಣ
ಸರಕು= ಸಾಮಾನು
ತೋಬರಿ= ಕಾಳು ಹಾಕಿ ಕುದುರೆಯ ಬಾಯಿಗೆ ಕಟ್ಟುವ ಚೀಲ
ದಾಣಿ = ಕುದುರೆಗೆ ತಿನ್ನಲಿಕ್ಕೆ ಹಾಕುವ ಕಾಳು
ಒರಟು= ಹೇಳಿದಂತೆ ಕೇಳದ
ವೈಭವಕ್ಕಾಗಿ= ಚಂದಕ್ಕಾಗಿ
ಸಂಕಟಕಾಲ= ಜೀವ ಹೋಗುವ [ ಸಮಯ
ನೆಲೆ= ಗುಣ

## ೪. ಹೊಳೆ

**ಸಾರಾಂಶ:** — ಹೊಳೆಯು ಗುಡ್ಡದಿಂದ ಹುಟ್ಟಿ ಬರುವದು. ಮಳೆಗಾಲದಲ್ಲಿ ತುಂಬಿ ಹರಿಯುವದು. ನೀರು ಜಳಜಳ ಇರುವವು. ಅಂಬಿಗರು ಹರಿಗೋಲಿನಿಂದ ಜನರನ್ನು ದಾಟಿಸುವರು. ತುಂಬಿದ ಹೊಳೆಯಲ್ಲಿ ಮೊಸಳೆ, ಮೀನಗಳು ಬಹಳ. ನೀರನ್ನು ಕುಡಿಯಲಿಕ್ಕೂ ಒಗೆಯಲಿಕ್ಕೂ, ಮೈ ತೊಳೆಯಲಿಕ್ಕೂ ಉಪಯೋಗಿಸುವರು. ಹೊಲ, ತೋಟಗಳಿಗೆ ಬಿಡುವರು. ಹೊಳೆಯ ದಂಡೆಗಿರುವ ಉಸುಕಿನಲ್ಲಿ ಹುಡುಗರು ಆಡುವರು. ಒಮ್ಮೊಮ್ಮೆ ಹೊಳೆ ಮೇರೆದಪ್ಪಿ ಬಂದು ಎಡಬಲದ ಪೈರು ಹಾಳಾಗುವದುಂಟು. ಅಂತೂ ಹೊಳೆಯಿಂದ ಉಪಯೋಗ ಹೆಚ್ಚು.

ಸೂಸಿ= ತುಂಬಿ
ಸೆಳವಿನಿಂದ= ಜೋರಿನಿಂದ
ಅಂಚಿ= ದಂಡೆ
ಅಂದವಾಗಿ= ಚೆಂದವಾಗಿ
ಹರಿಗೋಲು= ಹೊಳೆಯಲ್ಲಿ ಜನರನ್ನು ದಾಟಿಸಲಿಕ್ಕೆ ಮಾಡಿದ ಬುಟ್ಟಿ
ಅಸಿಮಿಸಿ ಇಲ್ಲದೆ= ಹೆದರಿಕೆಯಿಲ್ಲದೆ.
ಧುಮುಕು= ಬೀಳು
ಗಾಣ= ಮೀನ ಹಿಡಿಯುವ ಬಲಿ
ಸುಳಿವು= ಸಪ್ಪಳ
ನೀರಿನ ಅರಬು= ನೀರು ಇಲ್ಲದಿರೋಣ

ಅಂಬಿಗ= ಹರಿಗೋಲು ನಡಿಸುವವ
ಅರಿಯೆವು= ತಿಳಿಯೆವು
ಎದೆಗಾರ= ಧೈರ್ಯವಂತ
ನಲಿ= ಸಂತೋಷಪಡು
ಮೇರೆವಪ್ಪಿ= ಎರಡೂ ಕಡೆಗೆ ದಂಡೆದಾಟಿ
ಮಳಲು= ಉಸುಕು
ಮರಮಳೆ= ದೊಡ್ಡಮಳೆ
ರೇವೆ= ಸೂಸುಮಣ್ಣು

## ೫. ಹಾಲು ಕೊಳ್ಳಿರಮ್ಮಾ

**ಪಲ್ಲ:**— ಹಾಲು ಬೇಕೇನಮ್ಮಾ. ಹಾಲು ಕೊಂಡುಕೊಳ್ಳಿರಮ್ಮಾ.

೧. ಎಮ್ಮೆಯ ಹಾಲು, ಆಡಿನ ಹಾಲು, ಆಕಳ ಹಾಲು ಇವೆ. ಕೊಳ್ಳಿರಮ್ಮಾ.

೨. ದೇಹ= ಶರೀರ, ಹಿತವು= ಹಿತಮಾಡುವದು. ಬಲು= ಬಹಳ, ರುಚಿಕರವು= ರುಚಿಯಾಗುವದು. ಆಹಾರ = ಅನ್ನ.

**ಭಾವಾರ್ಥ:**— ಹಾಲು ಶರೀರಕ್ಕೆ ಹಿತಮಾಡುವದು. ಹಾಲು ಬಹಳ ರುಚಿಕರವಾಗಿರುವದು. ಹಾಲು ಒಂದು ಆಹಾರದಂತೆ ಉಪಯೋಗವು.

೩. ತಮ್ಮಗಳು= ಸಣ್ಣವರು, ಹೆಮ್ಮೆ= ಕಸುವು, ಹೆಚ್ಚುತಲಿಹುದು= ಹೆಚ್ಚಾಗುವದು.

೪. ಮತಿ= ಬುದ್ಧಿ, ಬಲ= ಕಸವು, ಬೆಳೆಸುವದು= ಹೆಚ್ಚಿಸುವದು, ಸಿಗಲರಿಯದು= ಸಿಗಲಾರದು.

೫. ಮಹಿಮಾತ್ಮ ಗಾಂಧಿಜಿ= ಮಹಾತ್ಮಾ ಗಾಂಧಿಯು, ಮಹಿಮೆಯನು= ಕೀರ್ತಿಯನ್ನು, ಪಡೆದಿಹನು= ಹೊಂದಿರುವನು.

೬. ಹಸುವು= ಆಕಳು, ಹಸುಗೂಸು= ಸಣ್ಣ ಕೂಸು, ಹಸನಾಗಿ= ಚೆನ್ನಾಗಿ

೭. ಆರೈಕೆ= ಉಪಚಾರ, ಹಿತಕಾರಿ= ಹಿತಕರವು, ಕಳೆವುದಕ್ಕೆ= ಕಳೆಯಲಿಕ್ಕೆ.

೮. ತುರುಗಾಹಿ= ದನ ಕಾಯುವವ, ಮುರಹರ= ಕೃಷ್ಣ, ಹಸು= ಆಕಳು, ಪರಮಾತ್ಮನೆನಿಸಿದನು= ದೇವರು ಎನಿಸಿಕೊಂಡನು.

೯. ಹಾಲು ಕುಡಿದರೆ ನೀವು ಬಹುದಿವಸ ಬದುಕುವಿರಿ. ಹಾಲು ಸುಖ ಕೊಡುವಂಥಾದ್ದು ಕೊಳ್ಳಿರಮ್ಮಾ.

## ೬. ಮೋಡಿಕಾರನೂ ಇಲಿಯೂ

ಮೋಡಿಕಾರ=ಮಂತ್ರಗಾರ
ಗಾಸಿಯಾಗಿ=ನುಗ್ಗಾಗಿ
ಬಲವಂತ=ಶಕ್ತಿವಂತ
ಮೇಘರಾಜ=ಮೋಡಗಳ ಅರಸು
ಕುಗ್ಗಿಸಬಲ್ಲನು=ಕಡಿಮೆಮಾಡಬಲ್ಲನು
ವಾಯುದೇವ=ಗಾಳಿ
ತರುಬಿ=ಅಡ್ಡಗಟ್ಟಿ
ವೇಗವನ್ನು=ಭರವನ್ನು
ಮೋಡಿಹಾಕಿ=ಮಂತ್ರಹಾಕಿ
ಕನ್ನೆ=ಹೆಣ್ಣು ಹುಡುಗಿ
ಹೋರು=ಗುದ್ದು
ಮರುಗಿದನು=ದುಃಖಪಟ್ಟನು
ಕುಮಾರಿ=ಮದುವೆಯಾಗದ ಹುಡುಗಿ
ನಲಿದಾಡು=ಸಂತೋಷಪಡು
ಒತ್ತಾಯ=ಜುಲುಮೆ
ಬಯಕೆ=ಅಪೇಕ್ಷೆ

## ೭. ಜಪಾನೀ ಮಕ್ಕಳ ಹಬ್ಬ

**ಸಾರಾಂಶ—** ಜಪಾನವು ನಮ್ಮ ದೇಶದ ಪೂರ್ವಕ್ಕೆ ದೂರದಲ್ಲಿದೆ. ಆ ದೇಶದಲ್ಲಿ ಮಕ್ಕಳ ಹಬ್ಬವನ್ನು ಒಳ್ಳೇ ಸಂಭ್ರಮದಿಂದ ಮಾಡುವರು. ಮೇ ತಿಂಗಳ ೫ನೆಯ ತಾರೀಖಿನ ದಿನ ಗಂಡುಮಕ್ಕಳ ಹಬ್ಬವನ್ನು ಮಾಡುವರು. ಆಗ ಕಾರ್ಪ ಎಂಬ ಮೀನದಾಕಾರದ ಪಟ ಮಾಡಿ ಬಾಗಿಲ ಮುಂದೆ ನಿಲ್ಲಿಸುವರು. ಕಾರ್ಪ ಮೀನದಂತೆ ತಮ್ಮ ಮಕ್ಕಳು ಧೈರ್ಯವಂತರಾಗಬೇಕೆಂದೇ ಅವರ ಬಯಕೆ. ಆ ದಿನ ಪಟ ಹಾರಿಸುವರು. ಹುಡುಗರು ಬಿದುರಿನ ಕತ್ತಿಯನ್ನೂ, ಎಡಗೈಯಲ್ಲಿ ಗಡಿಗೆಯನ್ನೂ ಹಿಡಿದುಕೊಂಡು ಹುಸಿ ಕಾಳಗ ಮಾಡುವರು. ಗಡಿಗೆಯನ್ನು ಒಡೆದವನೇ ಗೆದ್ದವನು. ಮಾರ್ಚ ಮೂರನೆಯ ತಾರೀಖಿನ ದಿನ ಹೆಣ್ಣುಮಕ್ಕಳ ಹಬ್ಬವನ್ನು ಮಾಡುವರು. ಆಗ ಹಳೆಯ ಮಾದರಿಯ ಗೊಂಬೆಗಳನ್ನು ಮಂಟಪದಲ್ಲಿ ನೋಡಲಿಕ್ಕೆ ಇಡುವರು. ಹುಡುಗಿಯರು ಸಿಂಗಾರಾಗಿ ಒಟ್ಟುಗೂಡಿ ಆಟಗಳನ್ನಾಡುವರು.

ಅಂದಚೆಂದದ=ಬಹಳ ಡೌಲಾದ

ಅಟ್ಟಹಾಸ=ವೈಭವ

ಜರಗುತ್ತಿರುವವು=ಆಗುತ್ತಿರುವವು

ಸಡಗರ=ವೈಭವ

ಪ್ರವಾಹ=ನೀರಿನ ಹರಿಯುವಿಕೆ

ಧಬೆಧಬೆ=ನೀರು ಎತ್ತರದಿಂದ ಕೆಳಗೆ ಬೀಳುವದು

ಸಾಮರ್ಥ್ಯ=ಕಸುವು

ಬಲವಾದುದು=ಹೆಚ್ಚಾದುದು

ಸಂಕಟ=ಕಷ್ಟ [ಮೈಮೇಲೆ ಬಂದ ಪ್ರಸಂಗ]

ಹೆಗ್ಗುರಿ=ಮುಖ್ಯ ಕೆಲಸ

ಕಾಯ್ದಿಟ್ಟ=ಕಾದು ಇಟ್ಟ

ಬಂಟ=ಶೂರ

ಸದರು=ಸಿಂಹಾಸನ

ಅಳುಕದವ=ಹೆದರದವ

ಎದೆಗೊಡುವವರು=ಧೈರ್ಯವುಳ್ಳವರು

ಬಯಕೆ=ಇಚ್ಛೆ

ಮೆರೆಯುವದು=ಶೋಭಿಸುವದು

ಆಟಿಕೆ=ಹುಡುಗರು ಆಡುವ [ಸಾಮಾನು

ಹುಸಿ=ಸುಳ್ಳು

ಕಾಳಗ=ಯುದ್ಧ

ಪವಿತ್ರ=ಶ್ರೇಷ್ಠ

ಅಣಿಯಾಗು=ತಯಾರಾಗು

ಪಕ್ವಾನ್ನ=ಸವಿಯಾದ ತಿನಸು

ಸಿಂಗಾರಾಗು=ಡೌಲಾಗು

ವಿನೋದ=ಚೇಷ್ಟೆ

ಚೆಲ್ಲಾಟ=ವಿನೋದದ ಆಟ

## ೮. ಮಳೆ

**ಸಾರಾಂಶ—** ಸಮುದ್ರದ ನೀರು ಸೂರ್ಯನ ಬಿಸಿಲಿನಿಂದ ಕಾದು ಉಗಿಯಾಗುವದು. ಅದು ಕಣ್ಣಿಗೆ ಕಾಣುವದಿಲ್ಲ. ಉಗಿಯು ಆಕಾಶಕ್ಕೆ ಹೋಗಿ ಮೋಡವಾಗಿ ತಂಪು ತಗಲಿದರೆ ಮಳೆಯಾಗುವದು. ಮಳೆಯ ನೀರಿನ ಕೆಲವು ಭಾಗ ನೆಲದಲ್ಲಿ ಇಂಗುವದು. ಹಳ್ಳಗಳು ನದಿಗೆ, ನದಿಗಳು ಸಮುದ್ರಕ್ಕೆ ಕೂಡುತ್ತವೆ.

ಕೆಂಜೋಳ=ಕೆಂಪುಜೋಳ

ಏರಿಬಂತು=ಆಕಾಶದಲ್ಲಿ ತುಂಬಿತು

ಸಾಲುಗಟ್ಟಿ=ಸಾಲಾಗಿ

ಸರವು=ನೀರು ಹರಿದು ತಗ್ಗುಬಿದ್ದ ಜಾಗೆ

ಗಾಳಿಯ ದಿಕ್ಕುಹಿಡಿದು=ಗಾಳಿ ಬೀಸಿದ ಕಡೆಗೆ

ಮಳೆಗಾಲ=ಮಳೆಯಾಗುವ ನಾಲ್ಕು ತಿಂಗಳು

ಒಮ್ಮೊಂದೊಮ್ಮೆ=ಒಮ್ಮೆಲೇ

ಸಾಗುವೆವು=ಹೋಗುವೆವು                ಸೊಗಸು=ಆನಂದ

ವಾಸಿಸು=ಇರು                ಸಮುದ್ರ=ಮಹಾಸಾಗರದ ಒಂದು ಭಾಗ

# ೯. ಆನೆ

**ಸಾರಾಂಶ:—** ಆನೆಯು ಬಲು ದೊಡ್ಡ ಪ್ರಾಣಿ. ಅದರ ಕಾಲುಗಳು ಕಂಬದಂತೆ, ಕಿವಿಗಳು ಮರದಂತೆ ಇರುವವು. ಕಣ್ಣು ಸಣ್ಣವು. ಮುಂದೆ ಉದ್ದವಾದ ಸೊಂಡಿ, ಹಿಂದೆ ಸಣ್ಣ ಬಾಲ ಇರುವದು. ತಲೆಯ ಮೇಲೆ ಎರಡು ಡುಬರಿಗಳು, ಎರಡು ಕೋರೆ ಹಲ್ಲು, ಸೊಂಡಿಯ ತುದಿಗೆ ಎರಡು ಮೂಗಿನ ಹೊಳ್ಳೆಗಳು ಇರುವವು. ಆನೆಯು ಸೊಂಡೆಯಿಂದ ನೀರು ಕುಡಿಯುವದು. ಮಲೆನಾಡಿನಲ್ಲಿಯೂ ಕಾರವಾರ, ಮೈಸೂರುಗಳ ಅಡವಿಗಳಲ್ಲಿಯೂ ಆನೆಗಳು ಬಹಳ. ಅವುಗಳಿಂದ ಗುಡ್ಡದೊಳಗಿನ ತೊಲೆಗಳನ್ನು ಎಳೆಸುವರು ಅದರ ಕೋರೆಯಿಂದ ಚಾಕು, ಕತ್ತರಿಗಳ ಹಿಡಿಕೆ, ಹಣಿಗೆ ಮಾಡುವರು.

ವಿದ್ಯಾರ್ಥಿ=ವಿದ್ಯೆ ಕಲಿಯುವವ                ಮಲೆನಾಡು=ಮಲ್ಲಾಡ

ದಪ್ಪಾಗಿ=ಗಡುತರವಾಗಿ                ಕಾನನ=ಅಡವಿ

ಹರಿದು=ಹರಕೊಂಡು                ವಾಸಿಸು=ಇರು

ಕಿರಿಯ=ಸಣ್ಣ                ಕೋರೆ=ಆನೆಯ ಹಲ್ಲು

ಎರೆನಾಡು=ಬೈಲು ಸೀಮೆ                ಕೈಗಾರಿಕೆ=ಕೈಯಿಂದ ತಯಾರಿಸುವ [ಸಾಮಾನು

ಗಡಿನಾಡು=ಬೈಲು ಹಾಗು ಮಲ್ಲಾಡಗಳ ನಡುವಿನ ದೇಶ

ಮಾವುತ=ಆನೆ ನಡೆಸುವವನು                ಬೆಲೆ=ಕಿಮ್ಮತ್ತು

ಬಲು ಜೀವ=ಬಹಳ ಪ್ರೀತಿ                ಸ್ವಾಮಿ=ಮಠದ ಒಡೆಯ

ಬಲ=ಕಸುವು                ಶ್ರೀಮಂತ=ಹಣವಂತ

ಸಭ್ಯ=ಉಪದ್ರ ಕೊಡದಂಥ                ಉತ್ಸವ=ಸಮಾರಂಭ

ಸೇಡು=ಸಿಟ್ಟು                ಅಂಬಾರಿ=ಆನೆಯ ಮೇಲೆ ಕೂಡು

ಅಂಕುಶ=ಆನೆ ನಡೆಯಿಸುವ ಆಯುಧ                ವದಕ್ಕೆ ಇಡುವ ಮಂಟಪ

# ೧೦. ತಿಳಿದು ನೋಡು

(೧) ಕಣ್ಣುಗಳೆರಡು=ಕಣ್ಣುಗಳು ಎರಡು
ಬಾಯ್ತಾನೊಂದು=ಬಾಯಿ ಒಂದು
ಏನಿಹುದಿದರರ್ಥ=ಇದರ ಅರ್ಥ ಏನಿರುವದು.
ಇಮ್ಮಡಿ ನೋಡೈ=ಎರಡುಪಟ್ಟು ನೋಡು
ಒಮ್ಮಡಿಯಾಡೈ=ಒಂದು ಪಟ್ಟು ಮಾತಾಡು
ಎಂಬುದೆ ಇದರರ್ಥ=ಅನ್ನುವದೇ ಇದರ ತಿರುಳು, ಗುಟ್ಟು

(೨) ಕರ್ಣಗಳೆರಡು=ಕಿವಿಗಳು ಎರಡು
ಬಾಯ್ತಾನೊಂದು=ಬಾಯಿ ತಾನು ಒಂದು
ಇಮ್ಮಡಿ ಕೇಳೈ=ಎರಡು ಪಟ್ಟು ಕೇಳು
ಒಮ್ಮಡಿ ಹೇಳೈ=ಒಂದು ಪಟ್ಟು ಹೇಳು

(೩) ಹಸ್ತಗಳೆರಡು=ಕೈಗಳು ಎರಡು
ಇಮ್ಮಡಿ ಗಳಿಸೈ=ಎರಡು ಪಟ್ಟು ಗಳಿಸು
ಒಮ್ಮಡಿ ಬಳಸೈ=ಒಂದು ಪಟ್ಟು ಖರ್ಚು ಮಾಡು

# ೧೧. ದಯಾಳು ಹಾಲಯ್ಯ

ಸಲಹು=ಜೋಪಾನ ಮಾಡು
ಬಾಳುವೆ=ಸಂಸಾರ
ನಸುಕು = ಸೂರ್ಯ ಬರುವದಕ್ಕಿಂತ ಮುಂಚೆ
ತೀರಿಸಿಕೊಂಡು = ಮಾಡಿಕೊಂಡು
ಕೋರುಧಾನ್ಯ = ಕಾಳಿನ ಭಿಕ್ಷೆ
ಒಪ್ಪಿಸಿ = ಕೈಯಲ್ಲಿ ಕೊಟ್ಟು
ನೀಡು = ಹಾಕು
ಚೆನ್ನಿಗ = ಚೆಲುವ
ಸದ್ಗುಣ = ಒಳ್ಳೇ ಗುಣ

ಬಂಗಾರದಂಥ = ಚಲೋ
ಹಿಗ್ಗು = ಸಂತೋಷ
ತುಂಬಾ = ಬಹಳ
ಕಿವಿಗೆ ಬಿತ್ತು = ಕೇಳಿಸಿತು
ತಟ್ಟನೆ = ಲಗೂನೆ
ತತ್ತರಿಸು = ನಡುಗು
ಕರಗಿತು = ಅಂತಃಕರುಣ ಹುಟ್ಟಿತು.
ಹಿಂಗಿತು = ಹೋಯಿತು
ಅಣಿಯಾದನು = ತಯಾರಾದನು
ಅಡಗಿದೆ = ಹೋಗಿದೆ

ಕೆಳೆ = ಪ್ರಕಾರ
ಉಕ್ಕುತ್ತಿತ್ತು = ಎದ್ದು ಕಾಣುತ್ತಿತ್ತು
ಹುಟ್ಟು = ಚಿಕ್ಕಂದಿನಿಂದ
ಕಂಗಾಲ = ಸೊರಗೋಣ
ಹೊಳೆದುಹೋದ = ಪ್ರಸಿದ್ಧಿ ಹೊಂದಿದ
ದಯಾಳು = ಅಂತಃಕರಣವುಳ್ಳವ

# ೧೨. ಕವಲೆತ್ತು

ತಲೆಬಾಗಿಲು = ಮುಖ್ಯಬಾಗಿಲು
ಮಾಟ = ಚೆಂದ
ತಿದ್ದಿ ಮಾಡಿದಂತೆ = ಕೈಯಿಂದ ತಿದ್ದಿದಂತೆ
ಹಣೆಚಿಕ್ಕಿ = ಹಣೆಯ ಮೇಲೆ ಚಿಕ್ಕೆ
ಅಂದ = ಚೆಂದ [ ಹೋಲಿಸಿದ್ದು
ಜೂಲ = ಬೆನ್ನ ಮೇಲೆ ಹಾಕಲಿಕ್ಕೆ
ಸಾಯಿತು = ಹೊರಗೆ ಕಾಣುತ್ತಿತ್ತು
ಕವಲೆತ್ತು = ಮಾತು ಕಲಿಸಿದ ಎತ್ತು
ಚಿಟಗೊಳಗ = ಸಣ್ಣ ಕೊಳಗ
ಪಂಗಲು = ಟಿಸಿಲು
ಹರಕೆ = ಆಶೀರ್ವಾದ
ಅಲ್ಲಾಡಿಸು = ಅಗಳಾಡಿಸು
ಸೋಜಿಗ = ಆಶ್ಚರ್ಯ
ನೀಡು = ಹಾಕು

# ೧೩. ಚಂದ್ರ

**ಸಾರಾಂಶ:** — ಚಂದ್ರನು ಮೊದಲು ಬಿಲ್ಲಿನಂತೆ ಪಶ್ಚಿಮದಿಕ್ಕಿನಲ್ಲಿ ಮೂಡುವನು; ಬೇಗ ಮುಳುಗುವನು. ಮುಂದೆ ಪ್ರತಿ ದಿನ ದೊಡ್ಡವನಾಗುತ್ತ ಹೆಚ್ಚು ಹೊತ್ತಿಗೆ ಮುಳುಗುವನು. ಹದಿನೈದನೇ ದಿನ ದುಂಡಗೆ ಪೂರ್ವಕ್ಕೆ ಮೂಡುವನು. ಬೆಳಗಿನವರೆಗೆ ಇರುವನು. ಆ ದಿನಕ್ಕೆ ಹುಣ್ಣಿವೆ ಅನ್ನುವರು. ಈ ಹದಿನೈದು ದಿನಕ್ಕೆ ಶುಕ್ಲಪಕ್ಷ ಅನ್ನುವರು. ಹುಣ್ಣಿವೆಯ ಮರುದಿನದಿಂದ ದಿನಾಲು ಎರಡು ಗಳಿಗೆ ತಡಮಾಡಿ ಮೂಡುವನು. ಹೀಗೆ ಹದಿನಾಲ್ಕು ದಿನ ನಡೆದು ಹದಿನೈದನೆಯ ದಿನ ಕಾಣುವದಿಲ್ಲ. ಆ ದಿನಕ್ಕೆ ಅಮಾವಾಸ್ಯೆ ಅನ್ನುವರು. ಈ ಹದಿನೈದು ದಿನಗಳಿಗೆ ಕೃಷ್ಣಪಕ್ಷ ಅನ್ನುವರು. ಎರಡು ಪಕ್ಷಗಳು ಕೂಡಿದರೆ ಒಂದು ತಿಂಗಳು.

ಚಂದ್ರನ ಬೆಳಕು ಹಿಟ್ಟು ಚಲ್ಲಿದಂತೆ ಬೀಳುವದು. ಅದಕ್ಕೆ ಬೆಳುದಿಂಗಳ ರಾತ್ರಿ ಬಲು ಹಿತಕರ. ಆಗ ಹುಡುಗರು ಆಟವಾಡುವರು. ಒಕ್ಕಲಿಗರು ಕಾಳು ಒಕ್ಕುವರು. ಜನರು ಮೈಯೊಡ್ಡಿ ಕೂಡುವರು.

| | |
|---|---|
| ಶಾಂತ = ಸಮಾಧಾನ | ಮುಳುಗು = ಹೋಗು |
| ಬೇಸಗೆ = ಬಿಸಿಲು ಕಾಲ | ಬೆಳಗಿ = ಬೆಳಕು ಕೊಟ್ಟು |
| ಮೈಯೊಡ್ಡಿ = ಮೈ ಬಿಟ್ಟು | ಬಂಡಿಯುಗಾಲಿಯಂತೆ = ದುಂಡಗೆ |
| ಒಕ್ಕುವರು = ರಾಶಿಮಾಡುವರು | ಗಳಿಗೆ = ೨೪ ಮಿನಿಟು |
| ಆಕಾಶ = ಮುಗಿಲು | ೨॥ ಗಳಿಗೆ = ೧ ತಾಸು |
| ಮೂಡು = ಹುಟ್ಟು | ಪಕ್ಷ = ಹದಿನೈದು ದಿನ |

## ೧೪. ಗಿಳಿ

೧. ಹಸಿರೆಲೆಗಳ ನಡುವೆ = ಹಸಿರು ಎಲೆಗಳ ಮಧ್ಯದಲ್ಲಿ
ಹಸಿರಾಗಿ ತೋರುವ = ಹಚ್ಚಗೆ ಕಾಣುವ

೨. ಹಸಿರು ಪಕ್ಕದ ಗಿಳಿ = ಹಸಿರು ಬಣ್ಣದ ರೆಕ್ಕೆಗಳುಳ್ಳ ಗಿಳಿಯು
ಪಸರಿಸೆ ದೆಸೆಯಲಿ = ತನ್ನ ರೆಕ್ಕೆಗಳನ್ನು ಹೊರಗೆ ಬಿಚ್ಚಲು
ಹಸನು ಮಾತಿನ = ಒಳ್ಳೆಯ ಮಾತಿನ

೩. ತಂಪು ಮಾಮರದಲ್ಲಿ = ತಂಪಾದ ನೆರಳುಳ್ಳ ಮಾವಿನ ಗಿಡದಲ್ಲಿ
ಇಂಪಾಗಿ ಉಲಿಯುವ = ಸವಿಯಾಗಿ ಶಬ್ದ ಮಾಡುವ
ಮುದ್ದಿನ ಅರಗಿಳಿ = ಪ್ರೀತಿಯ ಅರಗಿಳಿಯನ್ನು

೪. ಕಲಿಸಿದ ನುಡಿಗಳ = ಕಲಿಸಿದಂಥ ಮಾತುಗಳನ್ನು
ಕಲಿಯುವಂಥ ಮರಿಗಿಳಿ = ಕಲಿಯುವ ಸಣ್ಣ ಗಿಳಿಯು
ಫಲತಿಂದು ಬದುಕುವ = ಹಣ್ಣುಗಳನ್ನು ತಿಂದು ಜೀವಿಸುವ
ಮಧುರ ಮೋಹದ ಗಿಳಿ = ಪ್ರಿಯವಾದ ಪ್ರೀತಿಯ ಗಿಳಿಯು

೫. ಹಿರಿಗಿಳಿ ಮರಿಗಿಳಿ = ದೊಡ್ಡ ಗಿಳಿ ಸಣ್ಣ ಗಿಳಿಗಳು
ಅರಗಿಳಿ ಕೂಡುತ = ಅರಗಿಳಿಗಳು ಕೂತುಕೊಂಡು
ಮರತುಂಬ = ಮರದ ತುಂಬೆಲ್ಲ
ಸರ ಸರ ಹರಿದಾಡುತಿರುವವು = ಲಗುಲಗು ಓಡಾಡುವವು

# ೧೫. ವೀರ ಅಭಿಮನ್ಯು

**ಸಾರಾಂಶ**—ಅಭಿಮನ್ಯು ಅರ್ಜುನನ ಮಗ. ತಾಯಿ ಸುಭದ್ರಾದೇವಿ. ಪಾಂಡವರೆಲ್ಲರಿಗೂ ಪ್ರೀತಿಯವನು. ಬಿಲ್ಲು-ಬಾಣಗಳ ವಿದ್ಯೆಯಲ್ಲಿ ನಿಪುಣನು.

ಕೌರವರಿಗೂ ಪಾಂಡವರಿಗೂ ದೊಡ್ಡ ಯುದ್ಧವಾಯಿತು. ಆದರಲ್ಲಿ ಅರ್ಜುನ ಕೃಷ್ಣರು ಬೇರೆಕಡೆಗೆ ಯುದ್ಧ ಮಾಡುತ್ತಿದ್ದರು. ಕೌರವನು ಧರ್ಮನನ್ನು ಹಿಡಿಯಬೇಕೆಂದು ಚಕ್ರವ್ಯೂಹದಂತೆ ದಂಡು ನಿಲ್ಲಿಸಿದನು. ಅದರಲ್ಲಿ ಒಳಸೇರುವದು ಮಾತ್ರ ಅಭಿಮನ್ಯುವಿಗೆ ಗೊತ್ತಿತ್ತು. ತಿರುಗಿ ಬರುವದು ತಿಳಿದಿರಲಿಲ್ಲ. ಈ ಸುದ್ದಿಯನ್ನು ಕೇಳಿ ಅಭಿಮನ್ಯುವು ಯುದ್ಧಕ್ಕೆ ಹೋದನು. ದಂಡಿನಲ್ಲಿ ಸೇರಿ ಕೊಲ್ಲಹತ್ತಿದನು. ಕೌರವರು ಮೋಸದಿಂದ ಹಿಂದೆ ಹೋಗಿ ಬಾಲಕನ ಕೈಗಳನ್ನು ಕತ್ತರಿಸಿದರು. ಮೈತುಂಬ ಗಾಯ ಮಾಡಿದರು. ಆದರೂ ಬಾಲಕನು ಹೆದರದೆ ಯುದ್ಧ ಮಾಡುತ್ತ ಜೀವ ಬಿಟ್ಟನು. ವೀರ ಅಭಿಮನ್ಯು ಎಂದು ಹೆಸರಾದನು.

ಹಗೆ= ವೈರಿ
ಒಳಿತಾಗಿ= ಚೆನ್ನಾಗಿ
ಹಣಿದನು= ಹೊಡೆದನು
ಬೆರಗುಗೊಳಿಸು= ಆಶ್ಚರ್ಯಪಡಿಸು
ನಿಪುಣ= ಜಾಣ
ಹವಣಿಕೆ= ಪ್ರಯತ್ನ
ಸೆರೆ ಹಿಡಿವವ= ಕಟ್ಟಿಹಾಕುವವ
ಮೋಸದಿಂದ= ಠಕ್ಕತನದಿಂದ
ಎದುರಾಳಿ= ವಿರೋಧಿಗಳು
ಎದೆಗುಂದಲಿಲ್ಲ= ಧೈರ್ಯ ಬಿಡಲಿಲ್ಲ
ಹಂಗುದೊರೆದು= ಆಸೆಬಿಟ್ಟು
ಚಕ್ರವ್ಯೂಹ= ಚಕ್ರದಂತೆ ದುಂಡಗೆ
ಒಡೆಯುವದು= ಪಾರಾಗುವದು
ಹಿಂದಕ್ಕೊತ್ತು= ಹಿಂದೆ ಸರಿಸು
ನುಗ್ಗಿದನು= ಒಳಗೆ ಸೇರಿದನು
ಮಳೆಗರೆ= ಮಳೆ ಸುರಿಸು
ಆರ್ಭಟಿಸು= ಅರ್ಭಾಟ ಮಾಡು [ಒದರು]
ತಡೆ= ನಿಲ್ಲಿಸು
ನೀಚ= ಕೆಟ್ಟ
ಕುಗ್ಗುತ್ತ= ಕಡಿಮೆಯಾಗುತ್ತ
ಪಡೆದನು= ಹೊಂದಿದನು

# ೧೬. ಹಳ್ಳಿಯು

**ಸಾರಾಂಶ**— ಹಳ್ಳಿಯಲ್ಲಿ ಸರಕಾರದ ಕೆಲಸ ಮಾಡಲಿಕ್ಕೆ ಮುಲ್ಕೀಗೌಡ, ಪೋಲೀಸ ಪಾಟೀಲ, ಓಲೇಕಾರರು, ಹೊಲೆಯರು ಇರುತ್ತಾರೆ. ಮುಲ್ಕೀ

ಗೌಡರು ಹೊಲದ ತೆರಿಗೆ ಎತ್ತುವರು. ಪೋಲೀಸಗೌಡರು ಕಳವು, ದರೋಡೆ ಆಗದಂತೆ ನೋಡಿಕೊಳ್ಳುವರು. ಕುಲಕರಣಿಯು ಹೊಲದ ತೆರಿಗೆಯ ಲೆಕ್ಕ ವನ್ನಿಡುವನು. ಗೌಡ ಶಾನಭೋಗರು ಹೇಳಿದ ಕೆಲಸವನ್ನು ಓಲೇಕಾರ, ಹೊಲೆಯರು ಮಾಡುವರು. ಗೌಡರು ತೆರಿಗೆಯ ಹಣವನ್ನು ತಾಲೂಕ ಕಚೇರಿಗೆ ಕಳಿಸುವರು. ಇವರೆಲ್ಲರಿಗೆ ಹೊಲಗಳನ್ನು ಇನಾಮು ಹಾಕಿ ಕೊಟ್ಟಿರುವರು. ಇವರಿಗೆ ವತನದಾರರೆನ್ನುವರು.

ಚಾವಡಿ = ಗೌಡ-ಕುಲಕರಣಿಯವರು ಕೂಡುವ ಸ್ಥಳ
ತೆರಿಗೆ = ಹೊಲ ಮಾಡುವ ರೈತರು ಸರಕಾರಕ್ಕೆ ಕೊಡುವ ಹಣ
ಸರಕಾರ = ನಮ್ಮನ್ನು ಆಳುವವರು
ಕಾಟ = ಉಪದ್ರ
ಓಲೇಕಾರ = ತೆರಿಗೆಯ ಹಣ ಒಯ್ಯುವವನು
ಕಾವಲಮಾಡು = ಕಾಯು
ಹಿತದ = ಹಿತವಾಗುವ
ಮುಲ್ಕೀಪಾಟೀಲ = ತೆರಿಗೆ ಎತ್ತುವ ಗೌಡ
ಸೇನಭೋವ = ಕುಲಕರಣಿ
ತಾಲೂಕ ಕಚೇರಿ = ಮಾಮಲೇದಾರರ ಕಚೇರಿ
ಪಂಚರು = ಊರ ಹಿರಿಯರು
ಸಂಬಳ = ಪಗಾರ
ವತನದ ಹೊಲ = ಇನಾಮಹಾಕಿ ಕೊಟ, ಹೊಲ

## ೧೭. ಚವತಿಯ ಚಂದ್ರ

**ಸಾರಾಂಶ** — ಗಣಪತಿಯು ಮಹಾದೇವರ ಮಗನು. ಅವನು ಇಲಿಯ ಮೇಲೆ ಕುಳಿತು ತಿರುಗಾಡುವನು. ಒಮ್ಮೆ ಗಣಪ್ಪನು ಕಡಬು ತಿಂದು ಇಲಿಯ ಮೇಲೆ ಕುಳಿತು ಹೋಗುವಾಗ ಒಂದು ಹಾವು ಬಂತು. ಇಲಿಯು ಹೆದರಿ ಓಡಿತು. ಗಣಪ್ಪನು ಬಿದ್ದನು. ಹೊಟ್ಟೆಯೊಡೆದು ಕಡಬುಗಳು ಹೊರ ಬಿದ್ದವು. ಕೂಡಲೇ ಅವನ್ನು ತುಂಬಿಕೊಂಡು ಹಾವು ಸುತ್ತಿಕೊಂಡನು. ಇದನ್ನು ನೋಡಿ ಚಂದ್ರನು ನಕ್ಕನು. ಗಣಪ್ಪನು ಸಿಟ್ಟಾಗಿ ಚಂದ್ರನಿಗೆ ಶಾಪ ಕೊಟ್ಟನು. ಆದರಿಂದ ಜನರು ಚೌತಿಯ ದಿನ ಚಂದ್ರನನ್ನು ನೋಡುವದಿಲ್ಲ.

ಸದ್ಗುಣಿ = ಒಳ್ಳೇ ಗುಣಗಳುಳ್ಳವನು.
ಪಕ್ವಾನ್ನ = ಸಕ್ಕರೆಯಿಂದ ಮಾಡಿದ ಜಿನಸು
ಭಕ್ತರು = ಪೂಜಿಸುವವರು

ಸಂಕಟ = ಕಷ್ಟ
ದೂರಮಾಡು = ಇಲ್ಲದಂತೆಮಾಡು
ಮೊತ್ತಮೊದಲು = ಎಲ್ಲಕ್ಕೂ ಮೊದಲು
ಭೋಜನ = ಊಟ
ನಗೆಯಾಡುವೆ = ನಗುತ್ತೀ
ಮೂರ್ಖನೇ = ಬುದ್ಧಿಯಿ:ಲ್ಲದವನೇ
ಶಾಪ = ಕೇಡಾಗಲಿ ಅನ್ನೋಣ
ಮನದಣಿಯೆ ಮನಸ್ಸಿಗೆ ಸಾಕಾಗುವಷ್ಟು
ದೆಸೆಗೆಟ್ಟು = ದಿಕ್ಕು ತಪ್ಪಿ
ಸೂರೆಯಾದವು = ಹೊರಚೆಲ್ಲಿದವು
ಆಸೆಬುರುಕ = ಬಹಳ ಆಸೆಯುಳ್ಳವ
ತಿಳಿಗೇಡಿ = ಬುದ್ಧಿಯಿಲ್ಲದವ
ಅರಿಷ್ಟ = ಕೇಡು
ಒದಗಲಿ = ಬರಲಿ

## ೧೮. ಕಾಗೆ

**ಸಾರಾಂಶ:**— ಕಾಗೆಗಳ ಚುಂಚು ಉದ್ದವಾಗಿ ಗಟ್ಟಿ. ಇರುವದು ರೆಕ್ಕೆಗಳು ಕಸುವುಳ್ಳವಿರುವವು. ಕಣ್ಣುಗಳು ಬಲು ಚುರುಕು. ಬಣ್ಣ ಕಪ್ಪು. ಕಾಗೆಗಳು ಕಾಳು–ಕಡಿಗಳನ್ನು ಅರಸಿ ತಿನ್ನುವವು. ಕೋಳಿಯ ಪಿಳ್ಳೆ, ತತ್ತಿಗಳನ್ನು ಕಚ್ಚಿಕೊಂಡು ಹೋಗುವವು. ಬೇವಿನ ಹಾಗೂ ನೆಣಸಿನ ಹಣ್ಣುಗಳನ್ನು ತಿನ್ನುವವು. ಸಂಜೆಗೆ ಗೂಡು ಸೇರುವವು. ಬೆಳಿಗ್ಗೆ ಎದ್ದು ಆಹಾರ ಹುಡುಕಲಿಕ್ಕೆ ಹೋಗುವವು. ಮರದ ಮೇಲೆ ಮನೆ ಕಟ್ಟಿ ತತ್ತಿ ಇಡುವವು.

ಹಿಂಡುಗಟ್ಟಿಕೊಂಡು = ಗುಂಪು ಕಟ್ಟಿಕೊಂಡು
ಹರಿ = ಟೊಂಗೆ
ಚುರುಕು = ತೀಕ್ಷ್ಣ
ಜಪ್ಪಿಸಿ = ಕಾದುಕೊಂಡು ಕುಳಿತು
ಪಿಳ್ಳೆ = ಮರಿ
ಕಚ್ಚಿಕೊಂಡು = ಬಾಯಲ್ಲಿ ಹಿಡಕೊಂಡು
ಜೀವಕಳೆದುಕೊಳ್ಳು = ಬಹಳ ಪ್ರೀತಿಮಾಡು
ಕೂಗು = ಒದರು
ಚುಂಚು = ಮೂಗು
ಅರಿಸಿ = ಹುಡುಕಿ
ಬೀಡಿಗೆ = ಗುಂಪಿಗೆ
ಬೆಳಗಿನ ಜಾವ = ಬೆಳಗು ಮುಂಜಾನೆ
ಚುಮುಚುಮು ಬೆಳಗು = ಸೂರ್ಯನು ಬರುವದಕ್ಕಿಂತ ಮೊದಲು
ಮೇಯುಲಿಕ್ಕೆ = ಆಹಾರ ಹುಡುಕಲಿಕ್ಕೆ
ಒಂಟಿಯಾಗಿ = ಒಂದೇ ಯಾಗಿ

## ೧೯. ಬಾವಿ ಬಿದ್ದ ಚಂದಪ್ಪ

ಒಕ್ಕಲಿಗ = ಹೊಲ ಮಾಡುವವ

ಅರವುಗೇಡಿ = ಬುದ್ಧಿಯಿಲ್ಲದವ

ಎಬಡ = ಅರಹುಚ್ಚ [ಬುದ್ಧಿಯಿಲ್ಲದವ]

ತಿಳುವಳಿಕೆ = ವಿಚಾರ

ಹಿಟ್ಟು ಚೆಲ್ಲಿದ ಹಾಗೆ = ಬೆಳ್ಳಗೆ

ಮೂಡಿದ = ಹುಟ್ಟಿದ

ಮಂಡ = ಬುದ್ಧಿ ಕಡಿಮೆಯಿದ್ದವ

ಸಿಡಿದು = ಹಾರಿ

ನಮ್ಮ ಪಾಲಿಗೆ = ನಮಗೆ

ಪಾತಾಳಗಡ = ಬಾವಿಯಲ್ಲಿ ಬಿದ್ದ ಸಾಮಾನುಗಳನ್ನು ತೆಗೆಯಲಿಕ್ಕೆ ಕಬ್ಬಿಣದ ಕೊಕ್ಕೆಗಳಿಂದ ಮಾಡಿದ್ದು

ಪಡಿಗೆ = ದೊಡ್ಡ ಕಲ್ಲಿಗೆ

ತೊಡಕಿಕೊಂಡಿತು = ಸಿಕ್ಕಿಕೊಂಡಿತು

ಹಿಂಜೋಲಿ = ಹಿಂದಕ್ಕೆ ಜೋಲಿ

ಚುಂಗು = ತುದಿ

## ೨೦. ಪಾತರಗಿತ್ತಿ

೧. ಬಣ್ಣದ ಹುಳವೇ = ಬಣ್ಣದ ರೆಕ್ಕೆಗಳುಳ್ಳ ಹುಳವೇ
ಜೇನದು ತುಂಬಿದ = ಸೀ ರಸವು ತುಂಬಿರುವ
ಹೂವಿನ ಮೇಲೆ = ಹೂಗಳ ಮೇಲೆ
ಹಾರಲೆ ಹುಳವೇ = ಎಲೇ ಹುಳವೇ ಹಾರು

೨. ಎಸೆವ ಪಕ್ಕವ = ಚೆಂದಕಾಣುವಂಥ ರೆಕ್ಕೆಗಳನ್ನು
ಪಸರಿಸಿ = ತೆರೆದು
ಬಣ್ಣದ ಹೊಸಪರಿ ಬೆಡಗನು = ಬಣ್ಣದ ಹೊಸತರದ ಸೌಂದರ್ಯವನ್ನು
ತೋರುವ ಹುಳವೇ = ತೋರಿಸುವಂಥ ಹುಳವೇ

೩. ಮಿಣಿಮಿಣಿಯೆಂದು = ಮಿಣಕ್ ಮಿಣಕ್ ಎಂದು
ಮಿನುಗುವ ಹುಳವೆ = ಹೊಳೆಯುವಂಥ ಹುಳವೆ
ಚಣವೂ ಬಿಡದಲೆ = ಒಂದು ಕ್ಷಣ ಸಹ ಸುಮ್ಮನಿರದೆ
ಹಾರುವ ಹುಳವೆ = ಹಾರಾಡುವಂಥ ಹುಳವೇ

೪. ಕಣ್ಣಿಗೆ ಹಬ್ಬವ = ಕಣ್ಣಿಗೆ ಆನಂದವನ್ನು
ಬೀರು ಎಲೆ ಹುಳವೇ = ಉಂಟುಮಾಡು ಎಲೆ ಹುಳವೇ

ನಿನ್ನಯ ಸೊಬಗನು=ನಿನ್ನ ಡೌಲನ್ನು
ತೋರು ಎಲೆ ಹುಳವೇ=ತೋರಿಸು ಎಲೆ ಹುಳವೇ
ಹರುಷದಿ ಬಾರೆಲೆ=ಸಂತೋಷದಿಂದ ಬಾ
ಪರಿಮಳ ಹುಳವೇ=ಸುವಾಸನೆಯುಳ್ಳ ಹುಳವೇ
ತರತರ ಬಣ್ಣದ=ನಾನಾತರದ ಬಣ್ಣದ
ಮೆರೆಯುವ ಹುಳವೆ=ಚಂದಕಾಣುವ ಹುಳವೇ

# ೨೧. ಧ್ರುವ

ಸಾರಾಂಶ:— ಹಿಂದಕ್ಕೆ ನಮ್ಮ ದೇಶದಲ್ಲಿ ಉತ್ತಾನಪಾದನೆಂಬ ಅರಸನಿದ್ದನು. ಅವನಿಗೆ ಸುನೀತಿ, ಸುರುಚಿ ಎಂಬ ಇಬ್ಬರು ಹೆಂಡರಿದ್ದರು. ಸುನೀತಿಯ ಮಗ ಧ್ರುವ, ಸುರುಚಿಗೆ ಉತ್ತಮನೆಂಬ ಮಗನಿದ್ದನು. ಸುರುಚಿಯ ಮೇಲೆ ಅರಸನ ಪ್ರೀತಿ ಬಹಳ. ಒಂದು ದಿನ ಧ್ರುವನು ತಂದೆಯ ಬಳಿಗೆ ಹೋಗಿ ತೊಡೆಯ ಮೇಲೆ ಕುಳಿತನು. ತಂದೆ ಮೈದಡವಿದನು. ಸುರುಚಿಯು ಇದನ್ನುನೋಡಿ ಸಿಟ್ಟಿನಿಂದ ಧ್ರುವನನ್ನುಒದ್ದು ಕೆಡವಿದಳು. ಧ್ರುವನು ಅಳುತ್ತ ಬಂದು ತಾಯಿಯ ಮುಂದೆ ಹೇಳಿದನು. ತಾಯಿಯು ಸಮಾಧಾನ ಹೇಳಿದಳು. ಧ್ರುವನು ಅಡವಿಗೆ ಹೋಗಿ ದೇವರ ಧ್ಯಾನ ಮಾಡುತ್ತ ಕುಳಿತನು. ದೇವರು ಅವನ ಭಕ್ತಿಗೆ ಮೆಚ್ಚಿ ಬಂದನು. ಧ್ರುವನು ಬೇಡಿದ ವರವನ್ನು ಕೊಟ್ಟು ಹೋದನು. ದೇವರಿಂದ ಧ್ರುವನಿಗೆ ಯಾರೂ ಕಸಕೊಳ್ಳದ ರಾಜ್ಯ ಸಿಕ್ಕಿತು. ಅದೇ ಧ್ರುವನ ನಕ್ಷತ್ರವು.

ದುಷ್ಟ=ಕೆಟ್ಟ
ಪೀಡಿಸು=ಕಾಡಿಸು
ಮೈದಡವು=ಮೈಮೇಲೆ ಕೈಯಾಡಿಸು
ಉರುಳಿದನು=ಬಿದ್ದನು
ಪಡೆದುಬಂದಿಲ್ಲ=ಬೇಡಿಬಂದಿಲ್ಲ
ಅಪ್ಪಣೆಪಡೆದು=ಅಪ್ಪಣೆತಕ್ಕೊಂಡು
ಭಕ್ತಿ=ಸೇವೆ
ಪ್ರತ್ಯಕ್ಷನಾದನು=ಎದುರಿಗೆ ಬಂದು ನಿಂತನು
ವಿನಯ=ನಮ್ರತನ
ಮಲತಾಯಿ=ಎರಡನೇ ತಾಯಿ
ದಯಪಾಲಿಸು=ಕೊಡು
ಮಾಯವಾದನು=ಕಾಣದಂತಾದನು

ದೇವರಧ್ಯಾನ=ದೇವರ ಹೆಸರನ್ನು [ಆನ್ನೋಣ
ಪರವೆ=ಚಿಂತೆ
ಸ್ಮರಿಸು=ನೆನಪುಮಾಡು
ವರ=ಬೇಡಿದ್ದನ್ನು ಕೊಡೋಣ
ಶಾಶ್ವತ=ಸ್ಥಿರ [ಎಂದೂ ಹೋಗದ]
ಪಡೆದನು=ಹೊಂದಿದನು

# ೨೨. ಸಿಂಹದ ದೊಡ್ಡಪ್ಪ

**ಸಾರಾಂಶ**— ಒಂದು ಮುದಿ ಹೋತು ಅಡವಿಗೆ ಮೇಯಲಿಕ್ಕೆ ಹೋದಾಗ ದೊಡ್ಡ ಮಳೆ ಬಂತು. ಅದು ತೋಯಿಸಿಕೊಂಡು ಒಂದು ಗವಿಯಲ್ಲಿ ಚಾಟಿಗೆ ಮಲಗಿತು. ಅದು ಹುಲಿಯ ಗವಿಯು. ಹುಲಿಯು ಗವಿಗೆ ಬಂದು, 'ಅಯ್ಯಾ ನೀನು ಯಾರು ? ಏಕೆ ಬಂದೆ?' ಎಂದು ಕೇಳಿತು. ಹೋತು " ನಾನು ಸಿಂಹದ ದೊಡ್ಡಪ್ಪ. ಈಗ ನಾಲ್ಕು ಹುಲಿಗಳನ್ನು ತಿಂದಿದ್ದೇನೆ. ನಿನ್ನನ್ನು ತಿಂದು ನನ್ನ ಗಡ್ಡ ತೆಗೆಸುವೆನು," ಅಂದಿತು. ಹುಲಿ ಹೆದರಿ ಓಡಿತು. ಹಾದಿಯಲ್ಲಿ ನರಿಯು ಇದನ್ನು ಕೇಳಿ ಹುಲಿಯನ್ನು ಗವಿಗೆ ಕರೆತಂದಿತು. ಆಗ ಹೋತು, ಭಪ್ಪರೆ ನರಿಯೇ, ಕಳ್ಳಹುಲಿಯನ್ನು ಹಿಡಕೊಂಡು ಬಂದೆ ಬಾ, ಅಂದಿತು. ಇದನ್ನು ಕೇಳಿ ಹುಲಿಯು ನರಿಯು ಮೋಸಮಾಡಿತೆಂದು ಅದನ್ನು ಎಳಕೊಂಡು ಓಡಿತು. ಕಡೆಗೆ ನರಿಯನ್ನು ತಿಂದುಬಿಟ್ಟಿತು.

ಮುದಿ=ಮುದುಕ
ಒತ್ತೊತ್ತೀಳುದ್ದ=ಒಂದು ತೋಳುದ್ದ
ಮೋಡಗವಿದು=ಮೋಡ ಮುಸುಕಿ
ಬೇಟೆಗೆ=ಪ್ರಾಣಿಗಳನ್ನು ಕೊಲ್ಲುವದಕ್ಕೆ
ಭಯಂಕರವಾದ=ಭಯಂಕರ ಆಕಾರದ
ಎದೆಯೊಡೆದು=ಅಂಜಿ
ಧೈರ್ಯ=ಗಟ್ಟಿಮನಸ್ಸು
ಅರಿವಿಲ್ಲದೆ=ಮೈಮೇಲಿ ಎಚ್ಚರಿಕೆ ಇಲ್ಲದೆ
ಕಟ್ಟಾದವು=ಬಂದು ಆದವು
ಗವಿ=ದೊಡ್ಡ ಹೊದರು
ಚಾಟಿಗೆ=ಮರೆಗೆ
ಬಂಡಾಟ=ಹೆದರಿ ಓಡೋಣ
ನಾಯಕ=ಮುಖ್ಯಸ್ಥ
ಯುಕ್ತಿ=ಹಂಚಿಕೆ
ಕೈತೋರಿಸು=ಬೆದರಿಸು
ಮೋಸಮಾಡಿತು=ಠಕ್ಕಿಸಿತು
ಹಾರುಗಾಲಿನಿಂದ=ವೇಗದಿಂದ
ಹೀರಿ=ಕುಡಿದು
ದೆಸೆಗೆಟ್ಟು=ದಿಕ್ಕುತಪ್ಪಿ

## ೨೩. ಕಂಬಾರ ಸಾಲೆ

**ಸಾರಾಂಶ:—** ಕಮ್ಮಾರರ ಕೆಲಸಕ್ಕೆ ಇಕ್ಕಳ, ಅಡಿಗಲ್ಲು, ಸುತ್ತಿಗೆ ಮುಂತಾದುವು ಬೇಕಾಗುವವು. ಇವೆಲ್ಲ ಕಬ್ಬಿಣದವು. ಗಾಳಿ ಹಾಕಲಿಕ್ಕೆ ತಿದಿ ಎಂಬ ಚರ್ಮದ ಚೀಲವಿರುವದು. ಕಬ್ಬಿಣದ ಕುಡ ಮುಂತಾದವು ಗಳನ್ನು ಕಾಸಿದರೆ ಮೆತ್ತಗಾಗುವವು. ಆಗ ಸುತ್ತಿಗೆಯಿಂದ ಬಡೆದರೆ ಹಿಗ್ಗು ವವು. ಬಿಸಿ ಇದ್ದಾಗಲೇ ನೀರಲ್ಲಿ ಎದ್ದಿದರೆ ಬಿರುಸಾಗುವದು. ಇದಕ್ಕೆ ನೀರು ಕುಡಿಸೋಣ ಅನ್ನುವರು. ಬಂಡಿಯ ಹಳಿಯನ್ನು ಕೆಂಪಗೆ ಕಾಯಿಸಿದರೆ ಹಿಗ್ಗು ವದು. ಆಗ ಗಾಲಿಗೆ ಹಾಕುವರು; ಮೇಲೆ ನೀರು ಸುರುವಿದರೆ ಮತ್ತೆ ಕಿರಿದಾಗಿ ಗಾಲಿಯನ್ನು ಗಟ್ಟಿಯಾಗಿ ಹಿಡಿದುಕೊಳ್ಳುವದು. ಇದೇ ಹಳಿ ಕಟ್ಟೋಣವು.

ಕಂಬಾರ ಸಾಲೆ= ಕಬ್ಬಿಣ ಸಾಮಾನು ಮಾಡುವ ಮನೆ
ಕುಡ= ಕಬ್ಬಿಣದಿಂದ ಮಾಡಿದ ಒಕ್ಕಲತನದ ಸಾಮಾನು
ಕಂಬಾರ= ಕಬ್ಬಿಣದಿಂದ ಸಾಮಾನು ಮಾಡುವವನು
ತಿದಿ= ಗಾಳಿ ಹಾಕುವ ಚರ್ಮದ ಚೀಲ. ಅಡಿಗಲ್ಲು= ಕಬ್ಬಿಣದ ದೊಡ್ಡ ತುಂಡು
ಇಕ್ಕಳ= ಕಾಸಿದ ಸಾಮಾನು ಹಿಡಿಯಲಿಕ್ಕೆ ಮಾಡಿದ್ದು
ಕಿಡಿ= ಕೆಂಡದ ಚೂರು ಹಿಗ್ಗಿತು= ಅಗಲವಾಯಿತು
ಹೀಚುವದು= ಅಗಲವಾಗುವದು ಹದನವಾದ= ಚೂಪು
ಹಣಿಸೋಣ= ಚೂಪು ಮಾಡೋಣ ಕುಳ್ಳುತಾಳಿ= ಕುಳ್ಳನ್ನು ಒಟ್ಟಿ
ತೊಡಿಸು= ಹಾಕು ಉರಿ ಹಚ್ಚೋಣ

## ೨೪. ದೊಡ್ಡ ಊರ ಪಯಣ

**ಸಾರಾಂಶ:—** ಹುಬ್ಬಳ್ಳಿಯು ದೊಡ್ಡ ಪಟ್ಟಣವು. ಒಂದು ಲಕ್ಷ ಜನಸಂಖ್ಯೆಯಿದೆ. ರೇಲ್ವೆ ಜಂಕ್ಶನ್ನ ಇದೆ. ನಾಲ್ಕೂ ಕಡೆಯಿಂದ ಗಾಡಿ ಗಳು ಬರುವವು. ಜನರ ಗದ್ದಲವಂತೂ ಬಹಳ. ಊರಲ್ಲಿ ಡಾಂಬರ ರಸ್ತೆ ಗಳಿವೆ. ಮಾರ್ಕೆಟು ದೊಡ್ಡದು. ಕಾಳು, ಹಣ್ಣು, ಹತ್ತಿ, ಕಾಯಿಪಲ್ಲೆ ಮುಂತಾದವುಗಳ ವ್ಯಾಪಾರ ಬಹಳ. ಶನಿವಾರ ಸಂತೆ ನೆರೆಯುವದು. ಗುರು ಸಿದ್ಧ ಸ್ವಾಮಿಗಳ ಮಠ, ಸಿದ್ಧಾರೂಢ ಸ್ವಾಮಿಗಳ ಮಠ, ಭಾರತ ಮಿಲ್ಲು, ಕಾಟನ್ ಮಾರ್ಕೇಟ ನೋಡತಕ್ಕಂಥವುಗಳಿವೆ.

ಬಿಡುವು=ಸೂಟೆ
ನೋಟಗಳು=ನೋಡತಕ್ಕ ಇಮಾರತುಗಳು
ಸ್ಟೇಶನು=ಉಗಿಬಂಡಿ ನಿಲ್ಲುವ ಸ್ಥಳ
ಕಣ್ಣಾರೆ=ಕಣ್ಮುಟ್ಟ
ವೈಭವ=ಐಶ್ವರ್ಯ
ತಿಳಿಯಲಾರದು=ಗೊತ್ತಾಗುವದಿಲ್ಲ
ನಿಟ್ಟಿನ=ದಿಕ್ಕಿನ
ಬೆರಗಾಗಿ=ಆಶ್ಚರ್ಯಪಟ್ಟು
ಕಚ್ಚು=ಕಡಿ
ಸಡಗರ=ಡೌಲು
ಮಾರ್ಕೇಟು=ಸಾಮಾನುಗಳನ್ನು ಮಾರುವ ಸ್ಥಳ
ಕಲಕಿದವು=ಕುಕ್ಕಿದವು
ಚಿನಿವಾಲಗಟ್ಟಿ=ಬೆಳ್ಳಿ ಬಂಗಾರದ ಸಾಮಾನುಗಳನ್ನು ಮಾರುವ ಸ್ಥಳ
ಜವಳಿಪೇಟೆ=ಅರಿವೆಯ ಅಂಗಡಿಗಳ ಸಾಲು
ಭವ್ಯ=ದೊಡ್ಡ
ವರ್ಕಶಾಪ=ಉಗಿಬಂಡಿಗಳನ್ನು ತಯಾರಿಸುವ ಕಾರಖಾನೆ
ಹೇಳಲಾಸಲ್ಲ=ಹೇಳಲಿಕ್ಕೆ ಬರುವಂತಿಲ್ಲ
ನನ್ನಿಂದಾಗದು=ನನ್ನಿಂದಾಗುವದಿಲ್ಲ
ಜಂಕ್ಶನ್=ಮೂರು ನಾಲ್ಕು ಕಡೆಯಿಂದ ಗಾಡಿಗಳು ಬಂದು ನಿಲ್ಲುವ ಸ್ಥಳ.

---

## ೨೫. ಗೋವಿನ ಕಥೆ

ಪೂರ್ವಕಥೆ:— ನಮ್ಮ ಕನ್ನಡ ದೇಶದೊಳಗೆ ಹಿಂದಕ್ಕೆ ಕಾಳಿಂಗನೆಂಬ ದನಕಾಯುವವನಿದ್ದನು. ಅವನು ಅಡವಿಯಲ್ಲಿ ದನ ಕಾಯುತ್ತಿದ್ದನು ಅಲ್ಲಿಯೇ ಗುಡ್ಡದೊಳಗೆ ಒಂದು ಹುಲಿಯು ವಾಸಮಾಡಿತ್ತು.

ಒಂದು ದಿವಸ ಪುಣ್ಯಕೋಟಿ ಎಂಬ ಆಕಳನ್ನು ಆ ಹುಲಿಯು ಅಡ್ಡಗಟ್ಟಿ 'ನಿನ್ನನ್ನು ತಿಂದು ಬಿಡುವೆನು' ಎಂದು ಗರ್ಜಿಸಿತು. ಆಗ ಆಕಳು 'ದಡ್ಡಿಯೊಳಗೆ ನನ್ನ ಮರಿಯಿರುವದು. ಅದಕ್ಕೆ ಹಾಲು ಕುಡಿಸಿ, ಒಂದು ಕ್ಷಣದಲ್ಲಿ ತಪ್ಪದೆ ಬರುವೆನು.' ಎಂದು ಹುಲಿಗೆ ಮಾತು ಕೊಟ್ಟು ದಡ್ಡಿಗೆ ಬಂದಿತು.

ಕೊಂದು ತಿನ್ನುವೆನೆಂಬ=ನಿನ್ನನ್ನು ಕೊಂದು ತಿನ್ನುತ್ತೇನೆ ಎಂಬ
ಚಂದದಿಂದಲಿ ಭಾಷೆ ಇತ್ತು=ಸಂತೋಷದಿಂದ ಮಾತು ಕೊಟ್ಟು
ಕಂದ ನಿನ್ನನು=ಮಗನೇ ನಿನ್ನನ್ನು
ನೋಡಿ ಹೋಗುವೆನು ಎಂದು=ನೋಡಿ ಹೋಗಬೇಕು ಎಂದು
ದೊಡ್ಡಿಗೆ ಬಂದೆನು=ಮನೆಗೆ ಬಂದೆನು

**ಭಾವಾರ್ಥ:**—'ನಿನ್ನನ್ನು ತಿನ್ನುತ್ತೇನೆ' ಎಂಬ ಹುಲಿಗೆ ಸಂತೋಷ ದಿಂದ ತಿರುಗಿ ಬರುವೆನು, ಎಂದು ಮಾತು ಕೊಟ್ಟು, ನಿನ್ನನ್ನು ನೋಡಿ ಹೋಗಲು ಬಂದಿರುವೆನು, ಎಂದು ಆಕಳು ಕರುವಿಗೆ ಹೇಳಿತು.

೨. ಅಮ್ಮ ನೀನು ಸಾಯಲೇಕೆ= ಅವ್ವ ನೀನು ಸಾಯುತ್ತೀಯೇಕೆ ?
ನಮ್ಮ ತಬ್ಬಲಿ ಮಾಡಲೇಕೆ= ನಮ್ಮನ್ನು ದಿಕ್ಕಿಲ್ಲದವರನ್ನಾಗಿ
ಸುಮ್ಮನಿಲ್ಲಿಯೆ ನಿಲ್ಲು= ಸುಮ್ಮನೆ ಇಲ್ಲಿಯೇ ಇರು [ಮಾಡುತ್ತೀ ಏಕೆ?
ಎಂದು ಅಮ್ಮನಿಗೆ= ಎಂದು ಆಕಳಿಗೆ
ಕರು ಹೇಳಿತು= ಕರುವು ಹೇಳಿತು

**ಭಾವಾರ್ಥ:**—ಅವ್ವ ನೀನು ಅಲ್ಲಿಗೆ ಹೋಗಿ ಏಕೆ ಸಾಯುತ್ತೀಯೆ ನಮ್ಮನ್ನು ದಿಕ್ಕಿಲ್ಲದವರನ್ನಾಗಿ ಮಾಡಿ ಹೋಗಬೇಡ. ಇಲ್ಲಿಯೇ ಇರು ಎಂದು ಕರುವು ಹೇಳಿತು.

೩. ಕೊಟ್ಟ ಭಾಷೆಗೆ= ಕೊಟ್ಟ ಮಾತಿಗೆ
ತಪ್ಪಲಾರೆನು= ತಪ್ಪಿಸಲಾರೆನು.
ಕೆಟ್ಟಯೋಚನೆ= ಮಾತು ತಿರುಗಿಸಬೇಕೆಂಬ ಆಲೋಚನೆಯನ್ನು
ಮಾಡಲಾರೆನು= ಮಾಡುವದಾಗುವದಿಲ್ಲ
ನಿಷ್ಠೆಯಿಂದಲಿ= ನೇಮದಿಂದ
ಪೋಪೆನು ಅಲ್ಲಿಗೆ= ಅಲ್ಲಿಗೆ ಹೋಗುವೆನು
ಕಟ್ಟಕಡೆಗಿದು ಖಂಡಿತ= ಕಡೆಗೆ ಇದು ನಿಶ್ಚಯವು

**ಭಾವಾರ್ಥ:**—ನಾನು ಕೊಟ್ಟ ಮಾತನ್ನು ಎಂದೂ ತಪ್ಪಿಸಲಾರೆನು. ನಿಶ್ಚಯವಾಗಿ ಮಾತು ಕೊಟ್ಟ ಪ್ರಕಾರ ಅಲ್ಲಿಗೆ ಹೋಗುವೆನು. ಎಂದು ಆಕಳು ಹೇಳಿತು.

೪. ಯಾರ ಮೊಲೆಯನು= ಯಾರ ಮೊಲೆಯನ್ನು
ಕುಡಿಯಲಿ ಅಮ್ಮ= ಕುಡಿಯಲಿ ಅವ್ವ
ಯಾರ ಸೇರಿ ಬದುಕಲಿ= ಯಾರ ಸಂಗಡ ಇದ್ದು ಬದುಕಲಿ
ಯಾರ ಬಳಿಯಲಿ ಮಲಗಲಿ= ಯಾರ ಹತ್ತಿರ ಮಲಗಲಿ
ಯಾರು ನನಗೆ ಹಿತವರು= ಯಾರು ನನಗೆ ಹಿತಮಾಡುವವರು

**ಭಾವಾರ್ಥ:**—ಅವ್ವ ನೀನು ಹೋದರೆ ನಾನು ಯಾರ ಮೊಲೆಯನ್ನು ಕುಡಿಯಲಿ, ಯಾರ ಸಂಗಡ ಇರಲಿ, ಯಾರ ಹತ್ತಿರ ಮಲಗಲಿ, ನನಗೆ ಯಾರು ಹಿತ ಮಾಡುವವರು ಎಂದು ಕರುವು ಅಳಹತ್ತಿತು.

೫, ೬. ಅಮ್ಮಗಳಿರ ಅಕ್ಕಗಳಿರ=ಎಲ್ಲ ಸಣ್ಣ ದೊಡ್ಡ ಆಕಳುಗಳಿರಾ
ನಮ್ಮ ತಾಯೊಡಹುಟ್ಟುಗಳಿರ=ದೊಡ್ಡವ್ವ ಚಿಕ್ಕವ್ವಗಳಿರಾ
ನಿಮ್ಮ ಕಂದನು ಎಂದು ಕಾಣಿರಿ=ನಿಮ್ಮ ಮಗನು ಎಂದು ತಿಳಿಯಿರಿ
ತಬ್ಬಲಿಯನು ಕರುವನು=ತಾಯಿಯಿಲ್ಲದ ಈ ಕರವನ್ನು
ಮುಂದೆ ಹೋದರೆ ಹಾಯಬೇಡಿರಿ=ಮುಂದೆ ಬಂದರೆ ಇರಿಯಬೇಡಿರಿ
ಕಂದ ನಿಮ್ಮವನೆಂದು ಕಾಣಿರಿ=ಈ ಕರವನ್ನು ನಿಮ್ಮ ಮಕ್ಕಳಂತೆ ನೋಡಿರಿ

**ಭಾವಾರ್ಥ:**— ಎಲ್ಲ ಸಣ್ಣ ದೊಡ್ಡ ಆಕಳುಗಳಿರಾ, ಈ ತಾಯಿಯಿಲ್ಲದ ಕರುವನ್ನು ನಿಮ್ಮ ಮಕ್ಕಳಂತೆ ನೋಡಿರಿ. ಇರಿಯಬೇಡಿರಿ. ಒದೆಯಬೇಡಿರಿ. ನಿಮ್ಮ ಸಂಗಡ ಕರಕೊಂಡು ಅಡವಿಗೆ ಹೋಗಿರಿ, ಎಂದು ಆಕಳು ತನ್ನ ಹಿಂಡಿನವರಿಗೆ ಹೇಳಿತು.

## ೨೬. ಗೋವಿನ ಕಥೆ

(೨ನೆಯ ಭಾಗ)

೧. ಕಟ್ಟಕಡೆಯಲಿ ಮೇಯಬೇಡ=ಕಡೆಯ ಭಾಗದಲ್ಲಿ ಮೇಯಲಿಕ್ಕೆ ಹೋಗಬೇಡ
ಬೆಟ್ಟದೊತ್ತಿಗೆ=ಗುಡ್ಡದ ಸಮೀಪಕ್ಕೆ
ಕೆಟ್ಟ ವ್ಯಾಘ್ರನು=ದುಷ್ಟ ಹುಲಿಯು
ಹೊಂಚುತಿರುವನು=ಕಾದುಕೊಂಡು ಕುಳಿತಿರುವನು
ನಟ್ಟನಡುವಿರು=ಎಲ್ಲರ ನಡುವೆ ಇರು

**ಭಾವಾರ್ಥ:**—ಮಗನೇ ಎಲ್ಲರನ್ನು ಬಿಟ್ಟು ಕಡೆಯ ಭಾಗಕ್ಕೆ ಮೇಯಲು ಹೋಗಬೇಡ. ಗುಡ್ಡದ ಸಮೀಪಕ್ಕೆ ಹೋಗಬೇಡ. ಅಲ್ಲಿ ದುಷ್ಟ ಹುಲಿಯು ಕಾದು ಕುಳಿತಿರುವದು. ನೀನು ಎಲ್ಲರ ನಡುವೆ ಇರು ಎಂದು ಕರುವಿಗೆ ಹೇಳಿತು.

೨. ತಬ್ಬಲಿಯು ನೀನಾದೆ= ನೀನು ಪರದೇಶಿಯಾದೆ
ಹೆಬ್ಬುಲಿಯ ಬಾಯಲ್ಲಿ ಹೋಗುವೆನು= ದೊಡ್ಡ ಹುಲಿಯ ಬಾಯಲ್ಲಿ ಹೋಗುವೆನು.
ಇಬ್ಬರಾ ಋಣ ತೀರಿತು= ಇಬ್ಬರ ತಾಯಿ-ಮಕ್ಕಳ ಸಂಬಂಧ ಮುಗಿಯಿತು
ಎಂದು ತಬ್ಬಿಕೊಂಡಿತು= ಎಂದು ಹೇಳಿ ಅಪ್ಪಿಕೊಂಡಿತು

**ಭಾವಾರ್ಥ:**— ಮಗನೇ ನೀನು ತಾಯಿಯಿಲ್ಲದ ಪರದೇಶಿಯಾದೆ. ನಾನು ದೊಡ್ಡ ಹುಲಿಯ ಬಾಯಿಯಲ್ಲಿ ಹೋಗುವೆನು. ನಮ್ಮಿಬ್ಬರ ಸಂಬಂಧ ಇಂದಿಗೆ ಮುಗಿಯಿತು. ಎಂದು ಕರುವನ್ನು ಅಪ್ಪಿಕೊಂಡಿತು.

೩. ಗೋವು ಕರುವನು ಬಿಟ್ಟು= ಆಕಳು ಕರುವನ್ನು ದಡ್ಡಿಯಲ್ಲಿಯೇ ಬಿಟ್ಟು
ಸಾವಕಾಶ ಮಾಡದಂತೆ= ತಡಮಾಡದೆ ಹಾಗೆ
ಗವಿಯ ಬಾಗಿಲನು ಸೇರಿ= ಗವಿಯ ಹತ್ತಿರ ಹೋಗಿ
ತವಕದಲಿ ಹುಲಿಗೆ ಅಂದಿತು= ಅವಸರದಿಂದ ಹುಲಿಗೆ ಹೇಳಿತು

೪. ಕಂಡವಿದಕೋ ಮಾಂಸವಿದಕೋ= ಕಂಡ ಮಾಂಸಗಳನ್ನು ತೆಗೆದುಕೋ
ಗುಂಡಿಗೆಯ ಬಿಸಿ ರಕ್ತವಿದಕೋ= ಎದೆಯ ಬಿಸಿಯಾದ ರಕ್ತ ತೆಗೆದುಕೋ
ಚಂಡ ವ್ಯಾಘ್ರನೆ ನೀನು= ಕ್ರೂರವಾದ ಹುಲಿಯೇ ನೀನು
ಇದೆಲ್ಲವ ಉಂಡು= ಇವುಗಳನ್ನೆಲ್ಲ ತಿಂದು
ಸಂತೋಷದಿಂದಿರು= ಸಂತೋಷದಿಂದ ಇರು

**ಭಾವಾರ್ಥ:**— ಆಕಳು ಕರುವನ್ನು ಬಿಟ್ಟು ತಡಮಾಡದೆ ಹುಲಿಯ ಗವಿಯ ಬಾಗಿಲಿಗೆ ಬಂದು, ಹುಲಿಯೇ ನನ್ನ ಮಾಂಸ, ಬಿಸಿ ರಕ್ತ ಇವನ್ನೆಲ್ಲ ತಿಂದು ಸಂತೋಷದಿಂದಿರು ಎಂದು ಹೇಳಿತು.

೫. ಪುಣ್ಯಕೋಟಿಯ ಮಾತುಕೇಳಿ= ಪುಣ್ಯಕೋಟಿ ಎಂಬ ಆಕಳ ಮಾತನ್ನು ಕೇಳಿ
ಕಣ್ಣಿನಿಂದಲಿ ನೀರ ಸುರಿಸುತ=ಕಣ್ಣಿನಿಂದ ನೀರನ್ನು ಸುರಿಸುತ್ತ
ಕನ್ನೆ ಇವಳನು ಕೊಂದು=ಆಕಳು ಇವಳನ್ನು ಕೊಂದು
ತಿಂದರೆ=ನಾನು ತಿಂದರೆ
ದೇವನು ನನ್ನ ಮೆಚ್ಚನು= ದೇವರು ನನಗೆ ಮೆಚ್ಚುವದಿಲ್ಲ.

೬. ನನ್ನ ಒಡಹುಟ್ಟಿದವಳು ನೀನು= ನನ್ನ ಸೋದರಿಯು ನೀನು
ನಿನ್ನ ಕೊಂದು= ನಿನ್ನನ್ನು ಕೊಂದು
ಏನು ಪಡೆವೆನು= ಏನು ಹೊಂದುವೆನು
ಎನ್ನುತಾ ಹುಲಿಯು ಆಗಲೆ = ಅನ್ನುತ್ತ ಹುಲಿಯು ಕೂಡಲೆ
ತನ್ನ ಪ್ರಾಣವ ಬಿಟ್ಟಿತು= ತನ್ನ ಜೀವವನ್ನು ಬಿಟ್ಟಿತು

**ಭಾವಾರ್ಥ:**—ಆಕಳ ಮಾತನ್ನು ಕೇಳಿ ಹುಲಿಯು ಅಳುತ್ತ ಆಕಳು ನನ್ನ ಸಹೋದರಿಯು. ಇಂಥವಳನ್ನು ಕೊಂದು ತಿಂದರೆ ದೇವರು ಮೆಚ್ಚುವದಿಲ್ಲ. ಎಂದು ಚಿಂತಿಸಿ ತನ್ನ ಜೀವವನ್ನು ಬಿಟ್ಟಿತು.

ನೀತಿ:—ಬಾಲಕರೇ, ಮೂಕಪ್ರಾಣಿಯಾದ ಆಕಳು ತಾನು ಕೊಟ್ಟ ಮಾತನ್ನು ಹೇಗೆ ನಡಿಸಿತೋ ಅದರಂತೆ ಮನುಷ್ಯರಾದರೂ ತಾವು ಕೊಟ್ಟ ಮಾತನ್ನು ಎಂದೂ ತಪ್ಪಿಸಬಾರದು.

---

## ೨೭. ಬಾಳೆಯ ಗಿಡ

ನುಣುಪು = ಸಾಪು
ದಿಂಡು = ನಡುವಿನ ಭಾಗ
ಹರವು= ಅಗಲು
ದೇಟು = ಶಿರ
ಹದಮಾಡು= ತಯಾರುಮಾಡು
ನೆಡುತ್ತಾರೆ= ಹಚ್ಚುತ್ತಾರೆ
ಬಲಿತು = ದೊಡ್ಡವಾಗಿ
ಹೊದಿಕೆ = ಮುಚ್ಚಳ
ಉತ್ಸವ = ಸಮಾರಂಭ
ಪೂಟಿಗೆ = ಆಟಿಗೆ
ಆಯುಷ್ಯ = ಜೀವನ (ಬದುಕಿರುವ ಕಾಲ
ಮುಗಿಯಿತು= ತೀರಿತು

ಹಾಯಿಸು= ಬಿಡು (ಹಾಕು)

ಗಾದೆಯ ಮಾತು=ಬುದ್ಧಿಯ ಮಾತು

ಬಾಳುಳ್ಳವರು= ಬಾಳುವೆ ಮಾಡುವವರು

## ೨೮. ಜಹಾಂಗೀರನ ನ್ಯಾಯ

ನ್ಯಾಯವಂತನು= ನ್ಯಾಯದಿಂದ ನಡೆಯುವವನು

ದೂರು= ಸುದ್ದಿ

ವ್ಯವಸ್ಥೆ= ಅನುಕೂಲ

ಬೇಟೆ= ಮೃಗ

ಅಲೆದಾಡು=ತಿರುಗಾಡು

ಬೇಗಮಳು= ಬಾದಶಹನ ಹೆಂಡತಿ

ಅಗಸರಗಿತ್ತಿ=ಅಗಸನ ಹೆಂಡತಿ

ಮರಮರ ಮರುಗಿದನು= ಬಹಳ ದುಃಖಿಸಿದನು

ಅಪರಾಧ= ತಪ್ಪು

ಜಡಿಸಿದನು= ಹಾಕಿಸಿದನು

ತಕ್ಕ=ಯೋಗ್ಯ

ನಿರ್ಣಯ= ತೀರ್ಪು

ಕರುಳು ಕರಗಿದವು= ದಯೆ ಹುಟ್ಟಿತು

ಪ್ರಭುಗಳೇ= ಒಡೆಯರೇ

ಪಾಪ= ಕೆಟ್ಟಕೆಲಸದ ಫಲ

ಪದರಿನಲ್ಲಿ= ಸೆರಗಿನಲ್ಲಿ

ಎರಗು=ನಮಸ್ಕಾರ ಮಾಡು

ಬೆರಗಾದನು=ಆಶ್ಚರ್ಯಪಟ್ಟನು

ಆಸ್ತಿ=ಬದಕು

## ೨೯. ಕಾಮನ ಬಿಲ್ಲು

ಇಳಿಹೊತ್ತು =ಇಳಿಕೆಯ ಹೊತ್ತು

ಹೊಡೆಯಿತು= ಸುರಿಯಿತು

ಹೊರವಾಯಿತು= ನಿಂತಿತು

ನಿಚ್ಚಳ= ಸ್ವಚ್ಛ

ವಾದಿಸು= ತಿರುಗಿ ಮಾತಾಡು

ಮೂಡುವದು= ಹುಟ್ಟುವದು

ಹೊಳಪು =ಬೆಳಕು

ವಂದಿಸು =ನಮಸ್ಕರಿಸು

## ೩೦. ವೀರಬಾಲಕ ಶಿವಾಜಿ

ಪ್ರಸಂಗ =ವೇಳೆ

ರಾಶಿರಾಶಿಯಾಗಿ =ಗುಂಪುಗುಂಪಾಗಿ

ಭಾಪು =ಶಬಾಶ

ಬಾಯಲ್ಲಿ ಉಳಿಯುವಂತೆ= ಹೊಗಳುವಂತೆ

ಮೇಲಾಟ= ಮೇಲಾಗಬೇಕೆಂದು ಆಡುವ ಆಟ

ಗಂಡು= ಶೂರ

## ೩೧. ಯಾರು ತಪ್ಪುಗಾರರು

ಶಕುನ= ವಿಚಾರವಿಲ್ಲದ ನಂಬಿಗೆ
ಕ್ಷೌರಿಕ =ಹಜಾಮ
ನೆರೆಹಳ್ಳಿ =ಸಮೀಪದ ಹಳ್ಳಿ
ಹಿಗ್ಗು= ಸಂತೋಷ
ಅರಿಷ್ಟ =ಅಶುಭ
ಶಾಂತ =ಸಮಾಧಾನ
ಸಿಟ್ಟು ಬೆಂಕಿಯಾದನು =ಬಹಳ ಸಿಟ್ಟಾದನು
ಪ್ರಭುಗಳೇ= ಒಡೆಯರೇ
ಮೆಚ್ಚುಕೊಟ್ಟು = ಇನಾಮು ಕೊಟ್ಟು
ಅವಲಕ್ಷಣ= ಕೆಟ್ಟ ಚಿಹ್ನ
ನಸುಕು ಹರಿಯುತ್ತಿತ್ತು =ಬೆಳಕಾಗುತ್ತಿತ್ತು
ಕುದಿಯತೊಡಗಿದನು= ಚಿಂತೆ ಮಾಡಹತ್ತಿದನು
ಗಾಯ= ನೋವು

## ೩೨. ಗುಡ್ಡ

ಕಂಟಿ= ಸಣ್ಣ ಸಣ್ಣ ಗಿಡ
ಕಂಬಳಿ ಹಾಸಿದಂತೆ= ಕರ್ರಗೆ
ಕೊರಕಲು= ನೀರು ಹರಿದು ಕೊರೆದು ಆಗಿರುವ ತಗ್ಗು
ಹಳ್ಳ =ಕೊರಕಲಕ್ಕಿಂತ ದೊಡ್ಡ ನೀರಿನ ಪ್ರವಾಹ
ನದಿ= ಹಳ್ಳಕ್ಕಿಂತ ದೊಡ್ಡ ನೀರಿನ ಪ್ರವಾಹ
ಉರವಲಕ್ಕೆ= ಉರಿಹಚ್ಚಲಿಕ್ಕೆ

## ೩೩. ಹಳ್ಳಿಯ ಆಯಗಾರರು

ರೈತ= ಹೊಲಮಾಡುವವ
ಬಡಿಗಗಟ್ಟಿ =ಬಡಿಗಸಾಲಿ
ಸುಗ್ಗಿ =ಕಾಳು ಒಕ್ಕುವ ಕಾಲ
ಆಯ =ಕೆಲಸಗಾರರಿಗೆ ಕೊಡುವ ಕಾಳು
ಒಣಾ ಉಸಾಬರಿ =ಹೆಚ್ಚಿನ ಕೆಲಸ
ಹೆಚ್ಚುತ್ತಿದೆ =ಬೆಳೆಯುತ್ತದೆ
ಕೆಲಸಿ= ಹಜಾಮ
ಪದ್ಧತಿ= ರೂಢಿ
ಆಯಗಾರ =ಕಾಳು ತಕ್ಕೊಂಡು ಕೆಲಸಮಾಡುವವ
ಬಡಿಗ= ಕಟ್ಟಿಗೆಯ ಕೆಲಸ
ಕುಂಬಾರ =ಮಣ್ಣಿನಿಂದ ಗಡಿಗೆ ಮೊದಲಾದವುಗಳನ್ನು ಮಾಡುವವ
ಕಂಬಾರ= ಕಬ್ಬಿಣ ಸಾಮಾನು ಮಾಡುವವ
ನೆರವಾಗು= ಸಹಾಯವಾಗು

# ೩೪. ಅಜ್ಜನ ನಗೆ

## ಪಲ್ಲ

ಅಜ್ಜ, ನಿನ್ನ ನೋಡಿದ ಕೂಡಲೆ ನಗೆಯು ಬರುತ್ತದೆ. ಅಪ್ಪನು ನಗಬೇಡೆಂದು ಹೊಡೆದರೂ ನಗೆಯು ನಿಲ್ಲಲೊಲ್ಲದು. ನೋಡಿದ ಕೂಡಲೆ ನಗೆಯು ಬರುತ್ತದೆ.

೧. ಲಂಡಪಂಜೆ=ಸಣ್ಣ ಪಂಜೆ
ಬಗಲಚೀಲ=ಬಗಲಲ್ಲಿ ಹಾಕುವ ಚೀಲ
ರಾಟಿನೂಲ=ರಾಟಿಯ ಮೇಲೆ ನೂಲು ತೆಗೆಯೋಣ
ಹೊಳೆವಕಣ್ಣು=ಹೊಳೆಯುವಂಥ ಕಣ್ಣು
ಬೆನಕ ಮೂಗು=ದೊಡ್ಡ ದುಂಡನ್ನ ಮೂಗು
ಆನೆಗಿವಿಯ=ಆನೆಯ ಹಾಗೆ ದೊಡ್ಡ ಕಿವಿಗಳು
ಹಿರಿಯ ಮುದುಕ=ವಯಸ್ಸಾದ ಮುದುಕ
ಹುರುಪು ತುಂಬಿ ನಗುವ=ಹುರುಪಿನಿಂದ ನಗುವ

ಭಾವಾರ್ಥ:— ಸಣ್ಣ ಪಂಜೆಯನ್ನು ಉಟ್ಟು ಉದ್ದ ಬಡಿಗೆಯ ಹಿಡಿದು, ಬಗಲಲ್ಲಿ ಚೀಲ ಹಾಕಿಕೊಂಡಿರುವ, ಹೊಳೆಯುವ ಕಣ್ಣು, ಬೆನಕದಂತಿರುವ ದೊಡ್ಡ ಮೂಗು, ದೊಡ್ಡ ತಲೆ, ದೊಡ್ಡ ಕಿವಿಗಳುಳ್ಳ, ಹಲ್ಲು ಬಿದ್ದ, ವಯಸ್ಸಾದ ಮುದುಕನು ರಾಟಿಯ ಮೇಲೆ ನೂಲುತ್ತ ಹುರುಪಿನಿಂದ ನಗುವದನ್ನು ನೋಡಿದ ಕೂಡಲೆ ನಗೆಯು ಬರುವದು.

೨. ನಿನ್ನ ಮೊಗವ ನೋಡಿ=ನಿನ್ನ ಮುಖವನ್ನು ನೋಡಿ
ಬಗೆದು ನಿನ್ನ ಬಳಿಗೆ=ಯೋಚಿಸಿ ನಿನ್ನ ಹತ್ತರ
ಸೊಗಸಿನಿಂದ ಅಪ್ಪಿಕೊಂಡು=ಆನಂದದಿಂದ ಅಪ್ಪಿಕೊಂಡು
ಕುಣಿಯುತಿರುವೆವೋ=ಕುಣಿದಾಡುತ್ತಿರುವೆವೋ ಏನೋ
ಕುಣಿದು ಕುಣಿದು = ಬಹಳ ಕುಣಿದಾಡಿ
ಹರುಷವೆಂಬ ಕಡಲಿನಲ್ಲಿ= ಸಂತೋಷವೆಂಬ ಸಮುದ್ರದಲ್ಲಿ
ಈಸುತಿರುವೆವೋ= ಈಸುತ್ತಿರುವೆವೋ ಏನೋ ಎಂಬಂತೆ
ಆದೊಡೇನು = ಆದರೇನು [ ಆಗುವದು

**ಭಾವಾರ್ಥ:**—ಅಜ್ಜ, ನಗುತ್ತಿರುವ ನಿನ್ನ ಮೋರೆಯನ್ನು ನೋಡಿದ ಕೂಡಲೆ ನಿನ್ನ ಹತ್ತಿರ ಬಂದು ನಿನ್ನನ್ನು ಆನಂದದಿಂದ ಅಪ್ಪಿಕೊಂಡು ಕುಣಿದಾಡಬೇಕೆನಿಸುವದು. ಮತ್ತು ಸಂತೋಷವೆಂಬ ಸಮುದ್ರದಲ್ಲಿ ಈಸಾಡುತ್ತಿರುವಷ್ಟು ಆನಂದವಾಗುವದು. ಆದರೇನು ನಿನ್ನನ್ನು ನೋಡಿದ ಕೂಡಲೆ ನಗೆಯು ಬರುತ್ತದೆ.

೩. ನಗೆಗಾರ ಗಾಂಧಿ= ಹಾಸ್ಯಗಾರ ಗಾಂಧಿಯವರೇ
ನಿನ್ನ ನಗೆಯ ಭಾವದಲ್ಲಿ= ನಿನ್ನ ನಗೆಯ ಇರುವಿಕೆಯಲ್ಲಿ
ನಲ್ಮೆ–ದಯೆ= ಸಮಾಧಾನ ಅಂತಃಕರಣಗಳು
ತುಂಬಿ ತುಳುಕುತ್ತಿರುವವೋ= ತುಂಬಿ ಹೊರಚೆಲ್ಲುತ್ತಿರುವವೋ ಏನೋ ?
ಜನತಾ–ಜನಾರ್ದನನ= ಜನಸಮೂಹದ ಅಥವಾ ವಿಷ್ಣುವಿನ
ಸೇವೆ ಗೈವ= ಸೇವೆ ಮಾಡುವ
ನಿನ್ನ ಮುದ್ದು ನಗೆಯು= ನಿನ್ನ ಪ್ರೀತಿ ಬರುವ ನಗೆಯು
ಎಮಗೆ ಎಂದು ಬರುವದೋ=ನಮಗೆ ಎಂದಾದರೂ ಬರುವದೇನು ?
ಪೂಜ್ಯ= ಮಾನ್ಯ ಗಾಂಧಿಯೆ
ನಿನ್ನ ಪ್ರೀತಿ ನಗೆಯು= ನಿನ್ನ ಪ್ರೀತಿ ಬರುವಂಥ ನಗೆಯು

**ಭಾವಾರ್ಥ:**— ಹಾಸ್ಯಗಾರ ಗಾಂಧಿಯೇ ನಿನ್ನ ನಗೆಯಲ್ಲಿ ಪ್ರೀತಿ, ಸತ್ಯ, ಸಮಾಧಾನ, ಅಂತಃಕರಣಗಳು ತುಂಬಿ ಹೊರಚೆಲ್ಲುತ್ತಿರುವವು. ಜನಸೇವೆಯೇ ದೇವರ ಸೇವೆ ಎಂದು ತಿಳಿದು ಸೇವೆಮಾಡುವಂಥ ನಿನ್ನ ಪ್ರೀತಿಕರವಾದ ನಗೆಯು ನಮಗೆ ಎಂದಾದರೂ ಬರುವದೇನು ?

---

## ೩೫. ಹಳ್ಳಿಯೇ ಒಳ್ಳೆಯದಾಗಿತ್ತು.

ರುಚಿ= ಸವಿ
ಆಸೆ= ಅಪೇಕ್ಷೆ
ಅಂಗಡಿಕಾರ= ಅಂಗಡಿ ಇಟ್ಟವನು
ಮಿಠಾಯಿ=ಸಕ್ಕರೆಯಿಂದ ಮಾಡಿದ [ಸಾಮಾನು
ಹೋರು=ಗುದ್ದು
ಮನಬಲ್ಲಂತೆ= ಮನಸ್ಸಿಗೆ ಬಂದಂತೆ
ತಿನ್ನತೊಡಗು= ತಿನ್ನಹತ್ತು
ಮಿಠಾಯಿಗಾರ=ಮಿಠಾಯಿ ಮಾಡುವವ
ಸುಳುವು= ಸಪ್ಪಳ

ಬಿಲ=ಗುದ್ದು

ಉಳಿದು ಬಿಡುವೆನು=ಇದ್ದು ಬಿಡುವೆನು

ಆಸೆಬಡಕ=ಆಸೆಬುರುಕ

ಪಂಜರ=ಬಲೆ

ಅಡಗು=ಇಲ್ಲದಂತಾಗು

---

## ೩೬. ಬೆಕ್ಕೂ ನಾಯಿಯೂ

ಸಾಕು=ಜೋಕೆಮಾಡು

ಕಾಟ=ಉಪದ್ರವ

ತುಡುಗ=ಕಳ್ಳ

ಅಂಜಿಕೆ=ಹೆದರಿಕೆ

ಅರಿಯದವ=ಗುರುತಿಲ್ಲದವ

ಬೊಗಳಿ=ಒದರಿ

ಸಿಂಬಿ=ಸುರುಳಿ

ಬೇಟೆಯನ್ನು=ಇಲಿ ಮುಂತಾದ ಪ್ರಾಣಿಗಳನ್ನು

ಪಂಜರ=ಉಗುರು

ನಸು=ಸ್ವಲ್ಪ

ಗುರುತಿಸು=ಗುರುತು ಹಿಡಿ

ಕಾಮಿ=ಬೆಕ್ಕು

ಬೆನ್ನಟ್ಟಿತು=ಬೆನ್ನುಹತ್ತಿತು

---

## ೩೭. ಗೆಳೆಯರೂ ಕರಡಿಯೂ

ವ್ಯಾಪಾರ=ಮಾರಾಟ

ಜೀವದ=ಜೀವಕ್ಕೆ ಜೀವ ಕೊಡುವ

ಅಗಲುತ್ತಿದ್ದಿಲ್ಲ=ಬಿಟ್ಟು ಇರುತ್ತಿದ್ದಿಲ್ಲ

ಒತ್ತರ=ಲಗು

ಸಾಗಿತು=ಹೋಯಿತು

ಮುದ್ದಿಡುವ=ಮುದ್ದುಕೊಡುವ

ಸುತ್ತುವರಿದು=ಸುತ್ತುಹಾಕಿದ

ಇಂಪಾಗಿ=ಸವಿಯಾಗಿ

ಉಲಿಯುವ=ಶಬ್ದಮಾಡುವ

ಚಪಲ=ಚುರುಕು

ಬಡಕ=ತೆಳ್ಳಗಿನ

ಮದಡ=ದಡ್ಡ

ದಣಿವು=ಶ್ರಮ

ಚಕ್ಕಂದ=ಹರಟೆ

ಉರುಳಿ=ಬಿದ್ದು

ನೆರವಾಗು=ಸಹಾಯವಾಗು

ನೆಂಬು=ವಿಶ್ವಾಸವಿಡು

ಕ್ಷಮೆಬೇಡು=ಕೇಳಿಕೊಳ್ಳು

---

## ೩೮. ಹೊತ್ತಿಗೆ ತಕ್ಕ ಹಂಚಿಕೆ

ಪೆಟ್ಟಿಗೆ=ಹೊಡೆತಕ್ಕೆ

ಮೇಲು ಬುದ್ಧಿ=ಹೆಚ್ಚಿನ ಬುದ್ಧಿ

ಸಂಕಟ=ಕಷ್ಟ

ಎರವಾದೇನು=ಕಳಕೊಂಡೇನು

ಹಿಡಿಸಲಾರದಷ್ಟು=ಬಹಳ
ಗುಡುಗಿತು=ಒದರಿತು
ದೊರೆಗಳೇ=ಒಡೆಯರೇ
ಉಸಿರಾಡದೆ=ಉಸಿರು ಬಿಡದೆ
ಹೆದರಿಕೆ=ಅಂಜಿಕೆ
ಉಪವಾಸ=ಊಟಮಾಡದೆ ಇರೋಣ
ತಕ್ಕ=ಯೋಗ್ಯ

## ೩೯. 'ಹುಡು ತುತು'

ಬಿಡುವು=ಸೂಟಿ
ಹಿರೇ ಹುದ್ದರಿ=ಮುಖ್ಯಸ್ಥ.
ಚಪ್ಪಹಿಡಿದನು=ಎರಡು ಸಾಲಾಗಿ ನಿಲ್ಲಿಸಿದನು
ಗಡಿ=ಹದ್ದು
ನಿಶ್ಚಯಿಸು=ಗೊತ್ತುಮಾಡು
ಹುದ್ದರಿ=ಆಡುವ ಹುಡುಗರು
ಪ್ರಾರಂಭವಾಗಲಿ=ಸುರುವಾಗಲಿ
ಸಜ್ಜಾದರು=ತಯಾರಾದರು
ಎದುರಾಳಿ=ಎರಡನೇ ಗುಂಪಿನವರು
ಹೆಣಗು=ಪ್ರಯತ್ನಮಾಡು
ತೊಡಗಿತು=ಹತ್ತಿತು
ಮುತ್ತಿದರು=ಮೇಲೆ ಬಿದ್ದರು
ನಿಟ್ಟಿನವರು=ಸಾಲಿನವರು
ಸಿದ್ಧರಾದರು=ತಯಾರಾದರು
ನಿಯಮ=ಕರಾರು
ನುಸುಳಿ=ಜಾರಿ
ದಮ್ಮು ಬಿಗಿಹಿಡಿ=ಉಸುರು ಬಿಡಬೇಡ
ಗಡಿ=ಆಟದೊಳಗಿನ ಹುಡುಗ
ಭರ್ರನೆ=ಲಗೂನೆ
ಎರಗಿದನು=ಏರಿಹೋದನು
ಗುಂಗು ಗುಂಗುರಿಸಿ=ಅಡ್ಡ ತಿಡ್ಡ
ಹುರುಪಾದನು=ತಯಾರಾದನು
ಹೇವ=ಅಭಿಮಾನ. ಬಲ್ಲಿದ=ಜಾಣ
ದಮ್ಮಿಗೆ=ಉಸುರಿಗೆ

## ೪೦. ತನ್ನ ಮಂತ್ರ ತನಗೇ ತಿರುಗಿತು

ಸೊಂಪಾಗಿ = ಚೆಂದವಾಗಿ
ಹಾಲುಗಾಳು = ಎಳೆಕಾಳು
ಹಿಂಗಲಿಕ್ಕೆ = ಇಲ್ಲದಂತಾಗಲಿಕ್ಕೆ
ಸಾಧು = ಪ್ರಪಂಚ ಬಿಟ್ಟವನು
ಬೆಳಸಿ = ಹಾಲುಗಾಳು
ತತ್ರಾಣಿ = ಸಣ್ಣ ಬಾಯುಳ್ಳ ಪಾತ್ರೆ
ದಯ = ಅಂತಃಕರಣ
ಹಾವಳಿ = ಉಪದ್ರ
ಮಂತ್ರಿಸಿದರೆ = ಮಂತ್ರ ಅಂದರೆ
ಉಚ್ಚಾರ = ಬಾಯಿಂದ ಅನ್ನೋಣ
ಉರುಳು = ಬೀಳು
ಕೊಂಡಾಡಿದನು = ಹೊಗಳಿದನು

ದಣುವಾರಿತು = ದಣಿವು ಹೋಯಿತು
ಕಲ್ಯಾಣವಾಗಲಿ = ಶುಭವಾಗಲಿ
ಒಳಿತೇ = ನೆಟ್ಟಗೆ
ಗಡಬಡಿಸು = ಗಡಿಬಿಡಿಮಾಡು
ಅಳತೆ ತಪ್ಪಿತು = ಅಳತೆ ಮೀರಿತು
ಸೂರೆಯಾಯಿತು = ಹೋಯಿತು
ಸೆಟೆದು = ಸತ್ತು
ಉಬ್ಬಿನಲ್ಲಿ = ಸಂತೋಷದಲ್ಲಿ
ನೆತ್ತಿಗೇರಿದ = ತಲೆಗೆ ಏರಿದ
ಮಬ್ಬು = ಹುಚ್ಚು
ಮುಳುವು = ಹಾನಿ
ಸಂಪತ್ತು = ಐಶ್ವರ್ಯ

## ೪೧. ಶಬರಿ

ಗೋಳಿಟ್ಟರು = ಅತ್ತರು
ಗುಡಿಸಲು = ಹುಲ್ಲಿನಿಂದ ಮಾಡಿದ ಮನೆ
ಬಟ್ಟೆ = ಅರಿವೆ
ಬಂಗಾರದಂಥ = ಉತ್ತಮ ಗುಣಗಳುಳ್ಳ
ಋಷಿ = ಅಡವಿಯಲ್ಲಿ ತಪಸ್ಸು ಮಾಡುವವರು
ಬೇಡತಿ = ಬೇಡನ ಹೆಂಡತಿ
ಹಾರೈಸು = ಇಚ್ಛಿಸು
ಕದ್ದೊಯ್ದನು = ಕದ್ದು ತೆಗೆದು ಕೊಂಡು ಹೋದನು
ಬಡಭಕ್ತಿ = ಬಡವಳ ಭಕ್ತಿ
ಆತುರ = ಅವಸರ
ಕಾಣಿಕೆ = ಬಹುಮಾನ
ಮಾಗಿದ = ಹಣ್ಣಾದ
ಭಕ್ತಿಯನ್ನು = ಭಕ್ತಿಯಿಂದ ಕೊಟ್ಟ ಹಣ್ಣುಗಳನ್ನು
ಕೈಕೊಳ್ಳಬೇಕು = ತಕ್ಕೊಳ್ಳಬೇಕು
ದಿಟ್ಟಿಸಿ = ಲಕ್ಷಕೊಟ್ಟು
ಮೆಚ್ಚಿದನು = ಒಲಿದನು
ನಸು = ಸ್ವಲ್ಪ
ಸೋಜಿಗ = ಆಶ್ಚರ್ಯ
ಎಂಜಲ = ತಿಂದು ಉಳಿದ ಪದಾರ್ಥ
ಮಧುರ = ಸಿ
ಸಲ್ಲಿಸಬೇಕು = ಒಪ್ಪಿಸಬೇಕು

## ೪೨. ತೋಳನ

ತೀರ್ಪು = ಗೊತ್ತು (ನಿರ್ಣಯ)
ಕುರಿಯ ಪಡ್ಡಿ = ಕುರಿಗಳನ್ನು ಹಾಕಲಿಕ್ಕೆ ಸುತ್ತಲೂ ಬೇಲಿ ಕಟ್ಟಿದ ಜಾಗೆ
ಅಂಗಲಾಚಿ = ದೀನ ಸ್ವರದಿಂದ
ತಿಳುವಳಿಕೆ = ಬುದ್ಧಿ
ಕರುಣೆ = ಅಂತಃಕರಣ
ಸೋಗು ಮಾಡಿತು = ವೇಷ ಹಾಕಿತು

ಎಚ್ಚರಿಕೆ = ಹುಷಾರಿ   ನಿಜ = ಸತ್ಯ   ಪುಚ್ಚ = ಗರಿ   ಉದುರು = ಬೀಳು
ಶಾಸನ = ಶಿಕ್ಷೆ   ದುಷ್ಟ = ನೀಚ
ಅನುಮಾನ = ಸಂಶಯ   ನಿರಪರಾಧಿ = ತಪ್ಪು ಮಾಡದವ

## ೪೩. ವಚನಗಳು

ತಂದೆ ನೀನು = ನೀನೇ ತಂದೆಯು, ತಾಯಿ ನೀನು = ನೀನೇ ತಾಯಿಯಂತೆ ಇರುವವನು, ಬಂಧು ನೀನು = ನೀನೇ ಅಣ್ಣತಮ್ಮಂದಿರಂತೆ ಇರುವವನು, ಬಳಗ ನೀನು = ನೀನೇ ಆಪ್ತನು, ಎನಗೆ ನೀನಿಲ್ಲದೆ = ನನಗೆ ನಿನ್ನ ಹೊರತಾಗಿ, ಇಲ್ಲ ವಯ್ಯ = ಯಾರೂ ಇರುವದಿಲ್ಲಪ್ಪ, ಕೂಡಲ ಸಂಗಮದೇವಾ = ಕೂಡಲ ಸಂಗ ಮೇಶ್ವರನೇ, ಹಾಲಲಿ ಅದ್ದು = ಹಾಲಲ್ಲಿ ಎದ್ದು, [ತೇಲಿಸು, ರಕ್ಷಿಸು] ನೀರಲಿ ಅದ್ದು = ನೀರಲ್ಲಿ ಎದ್ದು, [ಮುಳುಗಿಸು]

ಕಾಗೆ ಒಂದಗುಳ ಕಂಡರೆ = ಕಾಗೆಯು ಒಂದು ಅನ್ನದ ಅಗಳನ್ನು ನೋಡಿದರೆ, ತನ್ನ ಬಳಗವೆಲ್ಲವನು = ತನ್ನ ಹಿಂಡನ್ನೆಲ್ಲ, ಕರೆಯದೇ = ಕರೆಯುವದಿಲ್ಲವೇ ? ಕೋಳಿ ಒಂದು ಗುಟುಕು ಕಂಡರೆ = ಕೋಳಿಯು ಒಂದು ತುಸು ನೀರು ಕಂಡರೆ, ತನ್ನ ಕುಲವೆಲ್ಲವನು = ತನ್ನ ಗುಂಪನ್ನೆಲ್ಲ, ಕರೆಯದೇ = ಕರೆಯುವದಿಲ್ಲವೇ ? ಶಿವಭಕ್ತನಾಗಿ = ಶಿವನ ಆರಾಧಕನಾಗಿ, ಭಕ್ತಿ ಪಂಥವಿಲ್ಲದಿದ್ದರೆ = ಭಕ್ತರ ಸೇವೆಗೆ ಸಮಯವಿಲ್ಲದಿದ್ದರೆ, ಆ ಕಾಗೆ ಕೋಳಿಗಿಂತ = ಆ ಕಾಗೆ ಕೋಳಿಗಳಿಗಿಂತ, ಕರಕಷ್ಟ = ಕಡೆಯಾಗುವನು.

ಕಳಬೇಡ = ಜಗಳ ಹಚ್ಚಬೇಡ, ಕೊಲಬೇಡ = ಅನ್ಯರನ್ನು ಕೊಲ್ಲಬೇಡ, ಹುಸಿಯ ನುಡಿಯಲು ಬೇಡ = ಸುಳ್ಳು ಮಾತಾಡಬೇಡ, ಮುನಿಯ ಬೇಡ = ಸಿಟ್ಟಾಗಬೇಡ, ಅನ್ಯರಿಗೆ ಅಸಹ್ಯಪಡಬೇಡ = ಎರಡನೆಯವರನ್ನು ಕಂಡರೆ ಅಸಂತೋಷ ಮಾಡಿಕೊಳ್ಳಬೇಡ, ತನ್ನ ಬಣ್ಣಿಸಬೇಡ = ತನ್ನನ್ನು ತಾನೇ ಹೊಗಳಿಕೊಳ್ಳಬೇಡ, ಇದಿರ ಹಳಿಯಲು ಬೇಡ = ಎದುರಿಗೆ ಬೈಯ್ಯಬೇಡ, ಇದೇ ಅಂತರಂಗಶುದ್ಧಿ = ಇದೇ ದೇಹದ ಒಳಗಿನ ಪವಿತ್ರತೆ, ಇದೇ ಬಹಿರಂಗ ಶುದ್ಧಿ = ಇದೇ ಹೊರಗಿನ ಪವಿತ್ರ ಕೆಲಸ, ಇದೇ ನಮ್ಮ ಕೂಡಲ ಸಂಗಮ ದೇವರನು = ಇದೇ ನಮ್ಮ ಕೂಡಲ ಸಂಗಮೇಶ್ವರನನು, ಒಲಿಸುವ ಪರಿ = ಮೆಚ್ಚಿಸುವ ರೀತಿಯು.